CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೧೦, ೨೦೦೫ (ಕಾರ್ತಿಕ ೧೯, ಶಕ ವರ್ಷ ೧೯೨೭) | ಸಂಚಿಕೆ ೪೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ಡಾ: ಬಿ.ಆರ್. ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ) ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಿದ್ದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 15 ಮುನೊಸೊ 2002, ದಿನಾಂಕ: 08.01.2003.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 15 ಮುನೊಸೊ 2002, ದಿನಾಂಕ: 20.09.2003.
3. ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ: ಸಂಕೀರ್ಣ/ಸಿಆರ್/5/2003-04, ದಿನಾಂಕ: 25.04.2005.

**ಪ್ರಸ್ತಾವನೆ:**

ಮೇಲೆ ಓದಲಾದ-1ರ ಸರ್ಕಾರಿ ಆದೇಶದಲ್ಲಿ ದಿನಾಂಕ: 01.08.2003 ರಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ವಿದ್ಯಾ ಸಂಸ್ಥೆ (ರಿ), ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಉಪ ವಿಭಾಗಾಧಿಕಾರಿಗಳು, ಚಿತ್ರದುರ್ಗ ಉಪ ವಿಭಾಗ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ ಓದಲಾದ-2ರ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ: 07-01-2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ-3ರ ಪತ್ರದಲ್ಲಿ ಆಡಳಿತಾಧಿಕಾರಿಯವರು, ಸರ್ಕಾರಿ ಕೆಲಸಗಳ ಒತ್ತಡದಿಂದ ಹಾಗೂ ಕಾರಣಾಂತರದಿಂದ ಸಂಸ್ಥೆಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ಆಡಳಿತಾಧಿಕಾರಿ ಅವಧಿಯನ್ನು ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸುವಂತೆ ಕೋರಿರುತ್ತಾರೆ. ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 35 ಮುನೊಸೊ 2005, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ ಡಾ: ಬಿ.ಆರ್. ಅಂಬೇಡ್ಕರ್ ವಿದ್ಯಾಸಂಸ್ಥೆ (ರಿ) ಧರ್ಮಪುರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 08.01.2004 ರಿಂದ 07.07.2004ರ ವರೆಗೆ, 08.07.2004 ರಿಂದ 07.01.2005ರ ವರೆಗೆ, 08.01.2005 ರಿಂದ 07.07.2005ರ ವರೆಗೆ ಮತ್ತು 08.07.2005 ರಿಂದ 6 ತಿಂಗಳ ಅವಧಿಗೆ ಅಥವಾ ನಿಯಮಾನುಸಾರ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಣಾ ಅವಧಿಯೊಳಗೆ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1331

**ಆದೇಶ ಸಂಖ್ಯೆ: ಕಂಇ 639 ಮುನೋಮು 2004, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ 34) ಕಲಂ 9 (1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಮೈಸೂರು ರಸ್ತೆಯಲ್ಲಿರುವ ಮೈಸೂರು ಕ್ರೋಂ ಟ್ಯಾನಿಂಗ್ ಕಂಪನಿಯವರಿಂದ ಖರೀದಿಸಲು ಉದ್ದೇಶಿಸಿರುವ 6.5 ಎಕರೆ ಜಮೀನಿನ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಮತ್ತು ಕರ್ನಾಟಕ ನೋಂದಣಿ ಕಾಯ್ದೆ, 1908ರ (ಕೇಂದ್ರೀಯ ಕಾಯ್ದೆ 1908-XVI) ಕಲಂ 78 ಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನೋಂದಣಿ ಶುಲ್ಕದಲ್ಲಿ ಶೇಕಡಾ 100 ರಷ್ಟು ವಿನಾಯಿತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1343 ವೆಚ್ಚ-7/2004, ದಿನಾಂಕ: 09.02.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1332

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಡಿ.ಕಾಂಬಳೆ, ಮಾಜಿ ಎಫ್.ಡಿ.ಎ. ಜಿಲ್ಲಾ ಪೊಲೀಸ್ ಕಛೇರಿ, ಬೆಳಗಾಂ ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶ್ರೀ ಎಸ್.ಡಿ.ಕಾಂಬಳೆ, ಮಾಜಿ ಎಫ್.ಡಿ.ಎ. ಬೆಳಗಾಂ ಇವರ ಅರ್ಜಿ ದಿನಾಂಕ:27-10-2004.
2. ಮಹಾ ನಿರೀಕ್ಷಕರು ಮತ್ತು ಅರಕ್ಷಕ ಮಹಾ ನಿರ್ದೇಶಕರ ಪತ್ರದ ಸಂಖ್ಯೆ:ಅಪೀಲು(4)22/99-2000 ದಿನಾಂಕ:13-01-2005.
3. ಕರ್ನಾಟಕ ಲೋಕ ಸೇವಾ ಆಯೋಗ ರವರ ಪತ್ರದ ಸಂಖ್ಯೆ:ಪಿಎಸ್‌ಸಿ 82 ಸಿಎಸ್‌ಎಸ್ 2005 ದಿನಾಂಕ:05-09-2005.

**ಪ್ರಸ್ತಾವನೆ:**

ಶ್ರೀ ಎಸ್.ಡಿ.ಕಾಂಬಳೆ, ಮಾಜಿ ಎಫ್.ಡಿ.ಎ. ಜಿಲ್ಲಾ ಪೊಲೀಸ್ ಕಚೇರಿ, ಬೆಳಗಾಂ ಇವರು ಹಿಂದೆ ಕಮಾಂಡೆಂಟ್ 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಕಚೇರಿಯಲ್ಲಿ ನಗದು ಶಾಖೆಯಲ್ಲಿ ಗುಮಾಸ್ತರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಬ್ಯಾಂಡ್ ಫಂಡ್‌ಗೆ ವಸೂಲಾತಿಯಾದ ಮೊತ್ತವನ್ನು ತಮ್ಮಲ್ಲಿಯೇ ಇಟ್ಟುಕೊಂಡು ತಾತ್ಕಾಲಿಕವಾಗಿ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಇಲಾಖಾ ವಿಚಾರಣೆ ನಡೆಸಿ ಶ್ರೀ ಎಸ್.ಡಿ.ಕಾಂಬಳೆ, ಪ್ರ.ದ.ಸ. ಇವರು 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಜಿಲ್ಲೆ ಇಲ್ಲಿ ದಿನಾಂಕ: 24-03-1996 ರಿಂದ 15-02-1997ರ ವರೆಗೆ ನಗದು ಶಾಖೆಯಲ್ಲಿ ಗುಮಾಸ್ತರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಆ ಅವಧಿಯಲ್ಲಿ ಬ್ಯಾಂಡ್ ಫಂಡ್ ಪ್ರಭಾರಹೊಂದಿದ್ದು, ಬ್ಯಾಂಡ್ ಫಂಡ್ ವಸೂಲಾತಿಯಾದ ರೂ.12,193/-ಗಳನ್ನು ದಿನಾಂಕ:06-06-1998ರ ವರೆಗೆ ಸರ್ಕಾರಕ್ಕೆ ಜಮಾ ಮಾಡದೇ ತಮ್ಮಲ್ಲಿಯೇ ಇರಿಸಿಕೊಂಡು ತಾತ್ಕಾಲಿಕವಾಗಿ ದುರುಪಯೋಗ ಪಡಿಸಿಕೊಂಡು ತಮ್ಮ ಕರ್ತವ್ಯದಲ್ಲಿ ಲೋಪವೆಸಗಿ ಉದಾಸೀನತೆ ಮತ್ತು ದುರ್ನಡತೆ ಪ್ರದರ್ಶಿಸಿರುವುದರಿಂದ ಆರೋಪಿತರಿಂದ ಸಮಜಾಯಿಷಿ ಪಡೆದು ಇಲಾಖಾ ವಿಚಾರಣೆಯಲ್ಲಿ ದೋಷಾರೋಪಣೆ ಸಾಬೀತಾಗಿರುವ ಹಿನ್ನಲೆಯಲ್ಲಿ ಡಿಜಿ ರವರು ಆದೇಶ ಸಂಖ್ಯೆ:ಅಪೀಲು(4)22/99-00 ದಿನಾಂಕ:22-04-2004ರಂದು ಆದೇಶ ಹೊರಡಿಸಿ ಶ್ರೀ ಎಸ್.ಡಿ.ಕಾಂಬಳೆ, ಪ್ರ.ದ.ಸ.ರವರನ್ನು ಕೆಲಸದಿಂದ ವಜಾ ಮಾಡಿರುತ್ತಾರೆ.

ಸದರಿ ಆದೇಶವನ್ನು ಪುನರ್ ಪರಿಶೀಲಿಸಿ ತನಗೆ ಕೆಲಸದ ಮೇಲೆ ಪುನರ್ ನೇಮಕ ಮಾಡಿಕೊಳ್ಳುವಂತೆ ಮೇಲೆ ಓದಲಾದ(1)ರಲ್ಲಿ ಅರ್ಜಿಯಲ್ಲಿ ಶ್ರೀ ಎಸ್.ಡಿ.ಕಾಂಬಳೆ ರವರು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಸದರಿ ಮೇಲ್ಮನವಿಯನ್ನು ತಿರಸ್ಕರಿಸುವಂತೆ ಮೇಲೆ ಓದಲಾದ (2)ರಲ್ಲಿ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ. ಸರ್ಕಾರದಲ್ಲಿ ಅರ್ಜಿದಾರರ ಮೇಲ್ಮನವಿ ಹಾಗೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿಗಳು ವಿಧಿಸಿರುವ ಸೇವೆಯಿಂದ ವಜಾ ಮಾಡಿದ ದಂಡನಾ ಆದೇಶವನ್ನು ಮಾರ್ಪಡಿಸಿ, ಕರ್ತವ್ಯಕ್ಕೆ ಪುನರ್ ನೇಮಕ ಮಾಡಲು ಸರ್ಕಾರವು ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಮೇಲೆ ಓದಲಾದ (3)ರಲ್ಲಿ ದಿನಾಂಕ:05-09-2005ರ ಪತ್ರದಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 193 ಪೊಸಇ 2004 ಬೆಂಗಳೂರು, ದಿನಾಂಕ: 17-09-2005.**

1) ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಶಿಸ್ತು ಪ್ರಾಧಿಕಾರದ ದಂಡನಾ ಆದೇಶವನ್ನು ಮಾರ್ಪಡಿಸಿ, ಸರ್ಕಾರವು ಶ್ರೀ ಎಸ್.ಡಿ.ಕಾಂಬಳೆ, ಪ್ರಥಮ ದರ್ಜೆ ಸಹಾಯಕರು, ಬೆಳಗಾಂ ಇವರು ಸಲ್ಲಿಸಿದ ಮೇಲ್ಮನವಿಯನ್ನು ಪುರಸ್ಕರಿಸಿ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡಿದೆ.

2) ಇವರ ವೇತನವನ್ನು ಇವರ ಹುದ್ದೆಯ ಕಾಲ ವೇತನ ಶ್ರೇಣಿಯ ಕೆಳಗಿನ ಹಂತಕ್ಕೆ ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತವಾಗಿ ಇಳಿಸಿದೆ.

3) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

4) ಅರ್ಜಿದಾರರ ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಪುನರ್ ನೇಮಕ ಮಾಡಿ ಕರ್ತವ್ಯಕ್ಕೆ ಹಾಜರಾಗುವ ಹಿಂದಿನ ದಿನಾಂಕದವರೆಗಿನ ಸೇವೆಯಿಂದ ಹೊರಗುಳಿದ ಅವಧಿಯನ್ನು `Dies-non` ಎಂದು ಪರಿಗಣಿಸಿದೆ.

5) ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿರುವ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:05-09-2005ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 1335

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ತಯಾರಿಸಿರುವ ಕರಡು 'ರಚನಾ ನಕ್ಷೆ'ಗೆ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ನಅಇ 51 ಬಿಎಂಆರ್ 2002 ದಿನಾಂಕ:2-6-2004.
2. ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಆಯುಕ್ತರವರ ಅರೆ ಸರ್ಕಾರಿ ಪತ್ರ ಸಂಖ್ಯೆ. ಬಿಎಂಆರ್‌ಡಿಎ/ಟಿಪಿ/ಬಿಎಂಆರ್/ಎಸ್‌ಕೆಆರ್/ಜಿಹೆಚ್‌ಕೆ/003/99-2002, ದಿನಾಂಕ: 4-1-2004 ಮತ್ತು ದಿನಾಂಕ:30-12-2004.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 2-3-2005 ರಂದು ನಡೆದ ಸಭೆಯ ನಡವಳಿಗಳು.

ಪ್ರಸ್ತಾವನೆ:-

ಮೇಲೆ (1) ರಲ್ಲಿ ಓದಲಾದ ದಿನಾಂಕ:2-6-2004ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ದಿನಾಂಕ:29-7-1999 ರಂದು ನಡೆದ ತನ್ನ ಪ್ರಾಧಿಕಾರದ 10ನೇ ಸಭೆಯಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ಸಮತೋಲನವಾದ ಯೋಜಿತ ಬೆಳವಣಿಗೆಗಾಗಿ ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ಧಪಡಿಸಿರುವ ಕರಡು ರಚನಾ ನಕ್ಷೆಯನ್ನು ಈ ಕೆಳಕಂಡ ಮಾರ್ಪಾಡು ಗಳೊಂದಿಗೆ ಅಳವಡಿಸಲು ಸರ್ಕಾರವು ತಾತ್ಕಾಲಿಕವಾಗಿ ಮಂಜೂರಾತಿ ನೀಡಿದೆ.

**ಅ) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ ಬರುವ ಇಂಟರ್‌ಸ್ಟ್ರಿಷಿಯಲ್ ವಲಯದಲ್ಲಿ ಅನುಮತಿಸಬಹುದಾದ ಉಪಯೋಗಗಳು:–**

ವ್ಯವಸಾಯ, ತೋಟಗಾರಿಕೆ ಮತ್ತು ಕೋಳಿಸಾಕಾಣಿಕೆ, ಹಾಲು ಶೈತ್ಯಾಗಾರಗಳು ತೋಟಗಳು, ನರ್ಸರಿಗಳು, ಫಾರ್ಮ್ ಹೌಸ್ ಮತ್ತು ತತ್ಸಬಂಧ ಕಟ್ಟಡ (ಫ್ಲಿಂತ್ ಏರಿಯ 200 ಚ.ಮೀ. ಮೀರದಂತೆ) ಜಮೀನಿನ ವಿಸ್ತೀರ್ಣ 1.2 ಹೆಕ್ಟೇರಿಗೆ ಕಡಿಮೆ ಇರಬಾರದು. ಇಟ್ಟಿಗೆ ಗೂಡುಗಳು, ಗಣಿಗಾರಿಕೆ ಹಾಗೂ ಜೇಡಿಮಣ್ಣು ಮತ್ತು ಕಲ್ಲುಗಳನ್ನು ತೆಗೆಯುವುದು (ಗರಿಷ್ಠ 3 ಅಡಿ ಅಳಕ್ಕೆ ಮಿತಿಗೊಳಿಸಿದ), ಹೆದ್ದಾರಿ ಸೌಲಭ್ಯಗಳಾದ ಪೆಟ್ರೋಲ್ ಬಂಕ್, ವೇಬ್ರಿಡ್ಜ್‌ಗಳು ಮತ್ತು ಚೆಕ್‌ಪೋಸ್ಟ್‌ಗಳು.

**ಆ) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ ಬರುವ ಇಂಟರ್‌ಸ್ಟ್ರಿಷಿಯಲ್ ವಲಯದಲ್ಲಿ ವಿಶೇಷ ಸಂಧರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:-**

ಪೂಜಾಸ್ಥಳಗಳು, ಪ್ರಾರ್ಥನಾ ಮಂದಿರಗಳು, ಶಾಲೆಗಳು, ಆಸ್ಪತ್ರೆಗಳು, ಉದ್ಯಾನವನ ಹಾಗೂ ತೆರೆದ ಸ್ಥಳಗಳು, ತೋಟಗಾರಿಕೆ ಉತ್ಪನ್ನಗಳನ್ನು ಸಂಗ್ರಹಿಸುವಿಕೆ ಹಾಗೂ ಮಾರಾಟ ಮಾಡುವಿಕೆ (ಬೆಳೆದ/ತಯಾರಿಸಿದ ಸ್ಥಳಕ್ಕೆ ಸೀಮಿತಗೊಂಡಂತೆ) ವ್ಯವಸಾಯ ಮತ್ತು ಉತ್ಪನ್ನಕ್ಕೆ ಸಂಬಂಧಿಸಿದ ಮೆಷಿನ್ನುಗಳ ರಿಪೇರಿ ಮತ್ತು ಸರ್ವೀಸಿಂಗ್, ಗ್ರಾಮಠಾಣದಿಂದ ಗರಿಷ್ಠ 200 ಮೀಟರ್‌ಗೆ ಮಿತಿಗೊಳಿಸಿದಂತೆ ಸ್ವಾಭಾವಿಕ ಬೆಳವಣಿಗೆಗಳಿಗಾಗಿ ವಸತಿ ಬೆಳವಣಿಗೆಗಳು (ರಚನಾ ನಕ್ಷೆಗೆ ಅನುಮೋದನೆ ನೀಡಿದ ದಿನಾಂಕದಿಂದ) ಇರುವ ಗ್ರಾಮಠಾಣದಿಂದ ಗರಿಷ್ಠ 200 ಮೀಟರ್‌ಗೆ ಮಿತಿಗೊಳಿಸಿದ್ದು ಈ ಕಟ್ಟಡಗಳ ನೆಲ ಮಹಡಿ ಮತ್ತು ಮೊದಲನೆ ಮಹಡಿಗೆ ಮಿತಿಗೊಳಿಸಲ್ಪಟ್ಟಿದೆ.

ಈ ಮೇಲಿನ ಮಾರ್ಪಾಡುಗಳನ್ನು ರಚನಾ ನಕ್ಷೆಯಲ್ಲಿ ಅಳವಡಿಸುವ ಮೊದಲು, ಸಾರ್ವಜನಿಕರಿಂದ ಸಲಹೆ ಮತ್ತು ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸಲು 30ದಿನಗಳ ಅವಕಾಶ ನೀಡಿ ಅಂತಿಮ ಕರಡು ರಚನಾ ನಕ್ಷೆಯನ್ನು, ಅನುಮೊದನೆಗಾಗಿ ಸರ್ಕಾರಕ್ಕೆ ಸಲ್ಲಿಸಲು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಿಳಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ:4-10-2004ರ ಮತ್ತು 30-12-2004ರ ಪತ್ರಗಳಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಉಲ್ಲೇಖ-1ರ ಸರ್ಕಾರದ ಆದೇಶದನ್ವಯ, ಕರಡು ರಚನಾ ನಕ್ಷೆಯಲ್ಲಿ ಸೇರಿಸಬೇಕಾಗಿರುವ ಅಂಶಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಸಾರ್ವಜನಿಕರಿಂದ/ಸಂಸ್ಥೆಗಳಿಂದ ಆಕ್ಷೇಪಣೆಗಳು/ಸಲಹೆಗಳನ್ನು ಕೋರಲಾಗಿತ್ತೆಂದು ತಿಳಿಸಿ, ಈ ಬಗ್ಗೆ ನಿಗದಿತ ಸಮಯದಲ್ಲಿ ಯಾವುದೇ ಆಕ್ಷೇಪಣೆಗಳನ್ನು ಸ್ವೀಕರಿಸಿಲ್ಲದಿರುವುದರಿಂದ ಉದ್ದೇಶಿತ ಮಾರ್ಪಾಡುಗಳನ್ನು ರಚನಾ ವಲಯ ನಿಯಮಗಳಲ್ಲಿ ಅಳವಡಿಸಿಕೊಳ್ಳಲು ಅವಕಾಶಮಾಡಿ ರಚನಾ ನಕ್ಷೆಗೆ ಅಂತಿಮ ಅನುಮೊದನೆ ನೀಡಲು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 2.3.2005 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ಕರಡು ರಚನಾ ನಕ್ಷೆಯನ್ನು ಅಂತಿಮಗೊಳಿಸುವ ಸಂಬಂಧ ನಡೆದ ಸಭೆಯಲ್ಲಿ, ಇತ್ತೀಚಿನ IT ಮತ್ತು BT ಪರಿಕಲ್ಪನೆ ಹಿನ್ನೆಲೆಯಲ್ಲಿ ಹಾಗೂ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಉದ್ದೇಶಿಸಿದ ಹೈಟೆಕ್ ಸಿಟಿ ಯೋಜನೆಯಿಂದಾಗಿ ಸರ್ಜಾಪುರ ತಾಲ್ಲೂಕಿನ ಪ್ರದೇಶವು ಸಾಕಷ್ಟು ಅಭಿವೃದ್ಧಿಗಳಿಂದ ಕೂಡಿದ್ದು IZ-6 ವಲಯದ ಈ ಪ್ರದೇಶವನ್ನು APZ-5ರ ವಲಯದ ವ್ಯಾಪ್ತಿಗೆ ತರಲು ಹಾಗೂ ಹೊಸಕೋಟೆ ತಾಲ್ಲೂಕಿನ ಪ್ರದೇಶವನ್ನು IZ-6 ವಲಯದಲ್ಲಿಯೇ ಮುಂದುವರಿಸಲು ತೀರ್ಮಾನಿಸಲಾಯಿತು.

ಕರಡು ರಚನಾ ನಕ್ಷೆಗೆ ಯಾವುದೇ ಆಕ್ಷೇಪಣೆಗಳು/ಸಲಹೆಗಳು ನಿಗದಿತ ಸಮಯದಲ್ಲಿ ಸಾರ್ವಜನಿಕರಿಂದ/ಸಂಸ್ಥೆಗಳಿಂದ ಸ್ವೀಕರಿಸಿಲ್ಲವಾಗಿರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ನಅಇ 51 ಬಿಎಂಆರ್ 2002,ಬೆಂಗಳೂರು ದಿನಾಂಕ: 21ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗೆಗಾಗಿ ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ಧಪಡಿಸಿರುವ ರಚನಾ ನಕ್ಷೆಯಲ್ಲಿ ಈ ಕೆಳಕಂಡ ಅಂಶಗಳನ್ನು ಅಳವಡಿಸಿ ಜಾರಿಗೊಳಿಸಲು ಸರ್ಕಾರವು ಮಂಜೂರಾತಿ ನೀಡಿದೆ.

**ಅ) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ ಬರುವ ಇಂಟರ್‌ಸ್ಟ್ರಿಷಿಯಲ್ ವಲಯದಲ್ಲಿ ಅನುಮತಿಸಬಹುದಾದ ಉಪಯೋಗಗಳು:-**

ವ್ಯವಸಾಯ, ತೋಟಗಾರಿಕೆ ಮತ್ತು ಕೋಳಿಸಾಕಾಣಿಕೆ, ಹಾಲು ಶೈತ್ಯಾಗಾರಗಳು
ತೋಟಗಳು, ನರ್ಸರಿಗಳು, ಫಾರ್ಮ್ ಹೌಸ್ ಮತ್ತು ತತ್ಸಂಬಂಧ ಕಟ್ಟಡ(ಪ್ಲಿಂತ್ ಏರಿಯ 200 ಚ.ಮೀ. ಮೀರದಂತೆ) ಜಮೀನಿನ ವಿಸ್ತೀರ್ಣ 1.2 ಹೆಕ್ಟೇರಿಗೆ ಕಡಿಮೆ ಇರಬಾರದು. ಇಟ್ಟಿಗೆ ಗೂಡುಗಳು, ಗಣಿಗಾರಿಕೆ ಹಾಗೂ ಜೇಡಿಮಣ್ಣು ಮತ್ತು ಕಲ್ಲುಗಳನ್ನು ತೆಗೆಯುವುದು(ಗರಿಷ್ಠ 3 ಅಡಿ ಆಳಕ್ಕೆ ಮಿತಿಗೊಳಿಸಿದೆ), ಹೆದ್ದಾರಿ ಸೌಲಭ್ಯಗಳಾದ ಪೆಟ್ರೋಲ್ ಬಂಕ್, ವೇಬ್ರಿಡ್ಜ್‌ಗಳು ಮತ್ತು ಚೆಕ್‌ಪೋಸ್ಟ್‌ಗಳು.

**ಆ) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ತಯಾರಿಸಿರುವ ರಚನಾ ನಕ್ಷೆಯಲ್ಲಿ ಬರುವ ಇಂಟರ್‌ಸ್ಟ್ರಿಷಿಯಲ್ ವಲಯದಲ್ಲಿ ವಿಶೇಷ ಸಂಧರ್ಭಗಳಲ್ಲಿ ಅನುಮತಿಸಬಹುದಾದ ಉಪಯೋಗಗಳು:-**

ಪೂಜಾಸ್ಥಳಗಳು, ಪ್ರಾರ್ಥನಾ ಮಂದಿರಗಳು, ಶಾಲೆಗಳು, ಆಸ್ಪತ್ರೆಗಳು, ಉದ್ಯಾನವನ ಹಾಗೂ ತೆರೆದ ಸ್ಥಳಗಳು, ತೋಟಗಾರಿಕೆ ಉತ್ಪನ್ನಗಳನ್ನು ಸಂಗ್ರಹಿಸುವಿಕೆ ಹಾಗೂ ಮಾರಾಟ ಮಾಡುವಿಕೆ (ಬೆಳೆದ/ತಯಾರಿಸಿದ ಸ್ಥಳಕ್ಕೆ ಸೀಮಿತಗೊಡಂತೆ) ವ್ಯವಸಾಯ ಮತ್ತು ಉತ್ಪನ್ನಕ್ಕೆ ಸಂಬಂಧಿಸಿದ ಮೆಷಿನ್ನುಗಳ ರಿಪೇರಿ ಮತ್ತು ಸರ್ವಿಸಿಂಗ್, ಗ್ರಾಮಠಾಣದಿಂದ ಗರಿಷ್ಠ 200 ಮೀಟರ್‌ಗೆ ಮಿತಿಗೊಳಿಸಿದಂತೆ ಸ್ವಾಭಾವಿಕ ಬೆಳವಣಿಗೆಗಳಿಗಾಗಿ ವಸತಿ ಬೆಳವಣಿಗೆಗಳು(ರಚನಾ ನಕ್ಷೆಗೆ ಅನುಮೋದನೆ ನೀಡಿದ ದಿನಾಂಕದಿಂದ ಇರುವ ಗ್ರಾಮಠಾಣದಿಂದ ಗರಿಷ್ಠ 200 ಮೀಟರ್‌ಗೆ ಮಿತಿಗೊಳಿಸಿದ್ದು ಈ ಕಟ್ಟಡಗಳ ನೆಲ ಮಹಡಿ ಮತ್ತು ಮೊದಲನೆ ಮಹಡಿಗೆ ಮಿತಿಗೊಳಿಸಲ್ಪಟ್ಟಿದೆ.

ನಗರದ ಯೋಜನಾತ್ಮಕ ಬೆಳವಣಿಗೆ ಮತ್ತು ಆಡಳಿತಾತ್ಮಕ ಹಿತದೃಷ್ಠಿಯಿಂದ IZ-6ರಲ್ಲಿನ ಸರ್ಜಾಪುರ ಹೋಬಳಿಗೆ ಸೀಮಿತಗೊಂಡಂತೆ ಬರುವ ಪ್ರದೇಶವನ್ನು APZ-5ಕ್ಕೆ ಒಳಪಡಿಸಿ ಮತ್ತು ಹೊಸಕೋಟೆ ತಾಲ್ಲೂಕಿಗೆ ಸೇರಿದ IZ-6 ಪ್ರದೇಶವನ್ನು ಹಾಗೆಯೇ ಉಳಿಸಿಕೊಳ್ಳಲು ಸರ್ಕಾರ ಆದೇಶಿಸಿದೆ.

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸ್ಥಳೀಯ ಯೋಜನಾ ಪ್ರಾಧಿಕಾರಗಳು ಈ ಅಂತಿಮವಾಗಿ ಅನುಮೋದಿತ ರಚನಾ ನಕ್ಷೆಯ ಆಧಾರದ ಮೇಲೆ ತಮ್ಮ ತಮ್ಮ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸ್ಥೂಲಾಭಿವೃದ್ಧಿ ಯೋಜನೆ/ವ್ಯಾಪಕಾಭಿವೃದ್ಧಿ ಯೋಜನೆ/ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಗಳನ್ನು ತ್ವರಿತವಾಗಿ ಸಿದ್ಧಪಡಿಸಲು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ನೆರವಿನೊಂದಿಗೆ ಕ್ರಮಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವ್ಹಿ.ಆರ್. ಇಲಕಲ್**
ಪಿ.ಆರ್. 1337 ಸಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## INFRASTRUCTURE DEVELOPMENT SECRETARIAT

**Subject:** Release of funds towards the 2nd draw down of the State Support to Bangalore International Airport Project.

**Read:** 1. G.O.No. IDD 11 DIA 2005, dated: 22.06.2005.
2. Letter dated: 31.08.2005 of the CEO, BIAL.

**PREAMBLE:**

In G.O. dated: 22.06.2005 read at Sl.No.(1) above, an amount of Rs.45.71 crores was released to KSIIDC towards the 1st instalment of draw down for the State Support to the Bangalore International Airport Project for the year 2005-06. In the letter read at Sl.No.(2) above, the Chief Executive Officer, Bangalore International Airport Limited had requested for release of an amount of Rs.14.10 crores towards the 2nd instalment of draw down schedule for the State Support to Bangalore International Airport Project for the period September 2005. To facilitate release of this 2nd draw down instalment this Government Order is issued.

**GOVERNMENT ORDER No. IDD 11 DIA 2005, Bangalore, Dated: 16th September 2005**

In this circumstances explained in the preamble, Government after careful examination of the proposal agrees to release a sum of Rs.14.10 crores (Rupees Fourteen Crores and Ten Lakhs only) to KSIIDC towards 2nd instalment of the draw down of the State Support to the Bangalore International Airport Project for September 2005 under the head of account "5465-01-190-2-02-100 (Plan) out of the balance provision of Rs.49.44 crores allocation available during 2005-06.

2. The Managing Director, KSIIDC is authorized to draw the above amount of Rs.14.10 crores (Rupees Fourteen Crores and Ten Lakhs) on a payees receipt counter signed by the Under Secretary to Government, Infrastructure Development Department.

3. This order is issued with the concurrence of Finance Department in U.O. Note No. FD 1621 Exp-1/05, dated: 15.09.2005.

By Order and in the Name of the Governor of Karnataka,
**T.B. RENUKAPRASAD**
P.R. 1338 Under Secretary to Government,
Infrastructure Development Department.

## ವಸತಿ ಸಚಿವಾಲಯ

**ವಿಷಯ:** ದಿನಾಂಕ: 02.10.2005 ರಿಂದ 15.10.2005 ರವರೆಗೆ 14 ದಿವಸಗಳ ಅವಧಿಯಲ್ಲಿ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಪುರಗಳಲ್ಲಿ "ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತಾದ ಅಂತರರಾಷ್ಟ್ರೀಯ ಕಾರ್ಯಗಾರದಲ್ಲಿ ಭಾಗವಹಿಸಲು ಶ್ರೀ ಪಿ. ಗೋಪಾಲಕೃಷ್ಣ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಇವರನ್ನು ಕಳುಹಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕ.ಕೊ.ನಿ.ಮ ಇವರ ಪತ್ರ ಸಂಖ್ಯೆ: ಕ.ಕೊ.ನಿ.ಮ: ಆಡಳಿತ:2005-06, ದಿನಾಂಕ: 31.8.2005.
2. ಉಪಮುಖ್ಯಸ್ಥರು (ಯೋಜನೆಗಳು) ಸ್ಥಳೀಯ ಮುಖ್ಯ ಕಾರ್ಯಾಲಯ, ಹುಡ್ಕೋ, ಬೆಂಗಳೂರು ರವರ ಪತ್ರ ಸಂಖ್ಯೆ: HUDCO/BRO/IHS/IESC/2005/752, ದಿನಾಂಕ: 28.7.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರು ಭಾರತ ಸರ್ಕಾರದ ಭಾರತೀಯ ವಸತಿ ಮತ್ತು ಅಭಿವೃದ್ಧಿ ಸಂಸ್ಥೆ (ಐ.ಹೆಚ್.ಎಸ್ ಇಂಡಿಯ) ಇವರ ನಾಯಕತ್ವದಲ್ಲಿ ಆಯೋಜಿಸಿದ್ದು, ದಿನಾಂಕ: 02.10.2005 ರಿಂದ 15.10.2005 ರವರೆಗೆ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಾಪುರಗಳಲ್ಲಿ "ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತು ಕಾರ್ಯಗಾರದಲ್ಲಿ ಭಾಗವಹಿಸುವಂತೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಉಪ ಮುಖ್ಯಸ್ಥರು (ಯೋಜನೆಗಳು), ಹುಡ್ಕೋ, ಬೆಂಗಳೂರು ಇವರು ತಿಳಿಸಿರುತ್ತಾರೆ. ಈ ಕಾರ್ಯಗಾರದಲ್ಲಿ ಭಾಗವಹಿಸುವ ಪ್ರತಿನಿಧಿ ಶುಲ್ಕವನ್ನು ಮಂಡಳಿಯ ಪರವಾಗಿ ಹುಡ್ಕೋ ಸಂಸ್ಥೆಯಲ್ಲಿರುವ (ಆರ್ ಮತ್ತು ಡಿ) ಹಣದಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ. ಈ ಕಾರ್ಯಗಾರಕ್ಕೆ ಭಾಗವಹಿಸುವ ಪ್ರತಿಯೋರ್ವ ಸ್ಪರ್ಧಿಯು 2950 EURO ಮೌಲ್ಯದ ಸ್ಪರ್ಧಾ ಶುಲ್ಕವನ್ನು ಪಾವತಿಸಬೇಕಾಗಿರುತ್ತದೆ. ಈ ಶುಲ್ಕವು ವಸತಿ, ಊಟ (ಉಪಹಾರ) ವೃತ್ತಿ ಶಿಕ್ಷಣ ಸಾಮಗ್ರಿಗಳು ಮತ್ತು ಸ್ಥಳೀಯ ವೀಕ್ಷಣೆ ಅವಕಾಶವನ್ನು ಒಳಗೊಂಡಿರುತ್ತದೆ. ಸದರಿ ಕಾರ್ಯಗಾರದಲ್ಲಿ ಭಾಗವಹಿಸಲು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಆದ ಶ್ರೀ ಪಿ. ಗೋಪಾಲಕೃಷ್ಣ ರವರಿಗೆ ಅನುಮತಿ ನೀಡಲು ತೀರ್ಮಾನಿಸಿದೆ.

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 103 ಕೊಮಂಇ 2005, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ದಿನಾಂಕ: 02.10.2005 ರಿಂದ 15.10.2005 ರವರೆಗೆ 14 ದಿವಸಗಳ ಅವಧಿಯಲ್ಲಿ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಾಪುರಗಳಲ್ಲಿ "ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತು ಕಾರ್ಯಗಾರಕ್ಕೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯ ಶ್ರೀ ಪಿ. ಗೋಪಾಲಕೃಷ್ಣ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರನ್ನು ನಿಯೋಜಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಕಾರ್ಯಗಾರದಲ್ಲಿ ಭಾಗವಹಿಸುವ ಪ್ರತಿನಿಧಿಯ ವೆಚ್ಚವನ್ನು ಹುಡ್ಕೋ ಸಂಸ್ಥೆಯು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ನಿಗದಿಪಡಿಸಿರುವ ಆರ್ ಮತ್ತು ಡಿ ನಿಧಿಯಿಂದ ಭರಿಸುವುದು.

ಈ ಪ್ರಸ್ತಾವನೆಗೆ ಮಾನ್ಯ ವಸತಿ ಸಚಿವರು ನೀಡಿರುವ ಅನುಮೋದನೆಯಂತೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಆರ್. ನಾಗರಾಜ**

ಪಿ.ಆರ್. 1339 ಪೀಠಾಧಿಕಾರಿ-4, ವಸತಿ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಅಲ್ಪಸಂಖ್ಯಾತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 2005-06ನೇ ಸಾಲಿನಲ್ಲಿ ವಸತಿ ಶಾಲೆ ತೆರೆಯುವ ಬಗ್ಗೆ.

**ಓದಲಾಗಿದೆ:** 2005-06ನೇ ಸಾಲಿನ ಆಯವ್ಯಯ ಭಾಷಣ.

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಉಪ ಮುಖ್ಯಮಂತ್ರಿ ಹಾಗೂ ಆರ್ಥಿಕ ಸಚಿವರು ರಾಜ್ಯದಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಅಭಿವೃದ್ಧಿಗಾಗಿ ಒಟ್ಟು 13 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ತೆರೆಯಲು ಘೋಷಿಸಿರುವುದು ಸರಿಯಷ್ಟೆ. ಅದರಂತೆ, ಅಲ್ಪಸಂಖ್ಯಾತರ ವರ್ಗದವರಿಗೆ 13 ವಸತಿ ಶಾಲೆಗಳನ್ನು ತೆರೆಯಲು ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 30 ಅಅನಿ 2005, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಅಲ್ಪಸಂಖ್ಯಾತರ ವರ್ಗದ ಬಡ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 2005-06ನೇ ಸಾಲಿನಿಂದ ಜಾರಿಗೆ ಬರುವಂತೆ ಈ ಕೆಳಕಂಡ ಸ್ಥಳಗಳಲ್ಲಿ ವಸತಿ ಶಾಲೆಗಳನ್ನು ತೆರೆಯಲು ಆದೇಶಿಸಿದೆ.

| | | | |
|---|---|---|---|
| 1 | ಮೈಸೂರು | 8 | ಮಾನ್ವಿ-ರಾಯಚೂರು ಜಿಲ್ಲೆ |
| 2 | ಹಾಸನ | 9 | ಗದಗ್ |
| 3 | ಚಿತ್ರದುರ್ಗ | 10 | ಕುಕನೂರು-ಯಲಬುರ್ಗಾ |
| 4 | ಕೊಪ್ಪಳ | 11 | ದಾವಣಗೆರೆ (ಕೆರೆಬಿಳಚಿ) |
| 5 | ಚಾಮರಾಜನಗರ | 12 | ಕೋಲಾರ |
| 6 | ಬಾಗಲಕೋಟೆ | 13 | ದಾಂಡೇಲಿ-ಉತ್ತರ ಕನ್ನಡ ಜಿಲ್ಲೆ. |
| 7 | ರಾಯಚೂರು | | |

ಈ ವಸತಿ ಶಾಲೆಗಳಿಗೆ ಬೇಕಾದ ಸಿಬ್ಬಂದಿಗಳ ಮತ್ತು ಇತರೆ ಆವರ್ತನ ಮತ್ತು ಅನಾವರ್ತಕ ವೆಚ್ಚಗಳ ಕುರಿತು ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಫ್‌ದರ್ ಬೇಗ್**

ಪಿ.ಆರ್. 1340 ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## INFRASTRUCTURE DEVELOPMENT SECRETARIAT

**Subject:** Release of funds to KSIIDC towards Equity Share Capital of Bangalore International Airport Ltd.

**Read:** 1. G.O.No. IDD 14 DIA 2002, dated: 8.7.2004.
2. Letter No. (Z-1)/557/2004-05, dated: 16.5.2005.

**PREAMBLE:**

In Government Order dated: 8.7.2004 read at Sl.No.1 above Government had released an amount of Rs.5.00 crores (Rupees five crores only) to KSIIDC towards equity share capital in Bangalore international Airport Limited out of the provision of Rs.13.00 crores provided during 2004-05.

The Executive Director, KSIIDC in his letter dated 16.5.2005 read at Sl.No.2 above has requested release of further contribution of Rs.2.19 crores as agreed upon in terms of the draw down schedule of the equity in Bangalore International Airport Limited.

Government have considered the matter and hence this order issues.

**GOVERNMENT ORDER No. IDD 41 DIA 2005, Bangalore, Dated: 22th September 2005**

After careful examination of the above proposal, Government are pleased to release a sum of Rs.2.20 crores (Rupees two crores and twenty lakhs only) to KSIIDC towards investment in equity share capital in Bangalore International Airport Ltd (BIAL) out of the budget provision of Rs.10.86 crores allocated during 2005-06 under the Head of Account "5465-01-190-2-01-211 KSIIDC Investments (Plan)".

2. The Managing Director, KSIIDC is authorized to draw the amount on a payee's receipt countersigned by the Under Secretary to Government, Infrastructure Development Department.

3. This order is issued with the concurrence of Finance Department vide its U.O.Note No.FD 1462 Exp.1/05, dated: 15.9.2005.

By Order and in the Name of the Governor of Karnataka,

**T.B. RENUKAPRASAD**

P.R. 1347 Under Secretary to Government,
Infrastructure Development Department.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ರಾಜ್ಯ ಮಟ್ಟದ ಪ್ರಾಣಿ ಕಲ್ಯಾಣ ಮಂಡಳಿಗೆ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರನ್ನು ಸದಸ್ಯರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಅಪಸಂ:ಆಶಾ: ರಾಪ್ರಾಕಮಂ:2005-06, ದಿನಾಂಕ: 19.06.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ ರವರು ದಿನಾಂಕ: 09.06.2005 ರಂದು ನೂತನವಾಗಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ತಿಳಿಸುತ್ತಾ, ರಾಜ್ಯ ಮಟ್ಟದ ಪ್ರಾಣಿ ಕಲ್ಯಾಣ ಮಂಡಳಿಗೆ ಸದರಿಯವರನ್ನು ಸದಸ್ಯರನ್ನಾಗಿ ನೇಮಕ ಮಾಡಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಆದ್ದರಿಂದ ದಿನಾಂಕ: 20.07.2002ರ ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 29 ಪಪಾಯೋ 2002ಕ್ಕೆ ತಿದ್ದುಪಡಿ ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ತಿದ್ದುಪಡಿ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 80 ಪಪಾಯೋ 2005, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2005**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ರಾಜ್ಯ ಮಟ್ಟದ ಪ್ರಾಣಿ ಕಲ್ಯಾಣ ಮಂಡಳಿಯ ಸದಸ್ಯರನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಸಂಪತ್‌ಕುಮಾರ್**

ಪಿ.ಆರ್. 1348 ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಇಂಇ 121 ಇಇಬಿ 2005, ಬೆಂಗಳೂರು, ದಿನಾಂಕ: 21/22ನೇ ಸೆಪ್ಟೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಇಂಇ 121 ಇಇಬಿ 2005 ದಿನಾಂಕ: 17.9.2005 ರಲ್ಲಿ ಶ್ರೀ ಎನ್. ಜಯರಾಜು, ಅಧ್ಯಕ್ಷರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ನೌಕರರ ಸಂಘ, ಬೆಂಗಳೂರು, ಇವರನ್ನು ಮಂಗಳೂರು, ಹುಬ್ಬಳ್ಳಿ, ಗುಲ್ಬರ್ಗಾ ಮತ್ತು ಚಾಮುಂಡೇಶ್ವರಿ

ವಿದ್ಯುತ್ ಸರಬರಾಜು ಕಂಪನಿ/ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಕ ಮಾಡಿರುವುದನ್ನು "ನಿವೃತ್ತಿ ಹೊಂದುವ ತನಕ" ಎಂಬ ಷರತ್ತಿಗೆ ಒಳಪಟ್ಟು ನೇಮಕ ಮಾಡಲಾಗಿದೆ ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 1349 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಅಲ್ಲಾಬಕಾಷ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 32 ಎಡಿಇ 2004, ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ಶ್ರೀ ಅಲ್ಲಾಬಕಾಷ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕು ತಹಶೀಲ್ದಾರರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಸಾಧಹಳ್ಳಿ ಗ್ರಾಮದ ಸ.ನಂ.238, 239 ಮತ್ತು 240ರ ಜಮೀನು ಖಾತೆ ಬದಲಾವಣೆಗೆ ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಆದೇಶ ಹೊರಡಿಸಿರುವ ಬಗ್ಗೆ ಇವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುತ್ತದೆ.

ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಲ್ಲಾಬಕಾಷ್, ಹಿಂದಿನ ತಹಶೀಲ್ದಾರ್, ದೇವರಹಳ್ಳಿ ತಾಲ್ಲೂಕು ಹಾಲಿ ನಿವೃತ್ತರು ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ರಡಿಯಲ್ಲಿ ನಿಗದಿಪಡಿಸಿರುವ ಕಾರ್ಯಭಾರವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 1352 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಒಂದು ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2003.

2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ಸಿಆರ್/38/2004-05, ದಿನಾಂಕ: 22.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಶ್ರೀ ರಾಮಚಂದ್ರ ದೇವ ಚಿತ್ರಗಿ ಮಠವನ್ನು ಗಾಣಿಗ ಸಮಾಜ ರವರು ಸ್ಥಾಪಿಸಿರುವ ದೇವಾಲಯವೆಂದು ತಿಳಿಸಿ, ಸದರಿ ದೇವಾಲಯವು ವ್ಯಾಸರಾಯ ಮಠಕ್ಕೆ ಬರುವುದಾಗಿ ಸಹಾಯಕ ಧರ್ಮ ದತ್ತಿ ಆಯುಕ್ತರು, ಬೆಳಗಾವಿರವರು ವರದಿಸಿರುವುದಾಗಿ, ಉತ್ತರ ಕನ್ನಡ ಜಿಲ್ಲಾಧಿಕಾರಿಯವರು ಹಾಗೂ ಧಾರ್ಮಿಕ ದತ್ತಿ ಆಯುಕ್ತರವರು ತಿಳಿಸಿ, ಸದರಿ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಯಿಂದ ಕೈ ಬಿಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 128 ಮುಆಬಿ 2004, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2005**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾರಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ, ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ದಿನಾಂಕ: 30.04.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು, ಚಿತ್ರಗಿ ಗ್ರಾಮದ ಶ್ರೀ ರಾಮಚಂದ್ರ ದೇವ ಚಿತ್ರಗಿ ಮಠ ಕ್ರಮ ಸಂಖ್ಯೆ 36, ಪುಟ ಸಂಖ್ಯೆ: 733 ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1356 ಪೀಠಾಧಿಕಾರಿ, ಕಂದಾಯ ಇಲಾಖೆ (ಮುಜರಾಯಿ).

## ತಿದ್ದುಪಡಿ ಆದೇಶ

**ಸಂಖ್ಯೆ: ಕಂಇ 12 ಮುನೋಸೇ(3) 2004(ಭಾ), ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2005**

ದಿನಾಂಕ: 11.08.2005ರ ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಮುನೊಸೇ (3) 2004 ರಲ್ಲಿ ಹೇಳಲಾಗಿರುವ "ಜವಾನರು / ಅಟೆಂಡರುಗಳು".

| ಕ್ರ.ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ಉಪ ನೋಂದಣಿ ಕಛೇರಿ, ಕನಕಪುರ | 1 |
| 2 | ಉಪ ನೋಂದಣಿ ಕಛೇರಿ, ಮಾಗಡಿ | 1 |
| 3 | ಉಪ ನೋಂದಣಿ ಕಛೇರಿ, ದೊಡ್ಡಬಳ್ಳಾಪುರ | 1 |
| 4 | ಉಪ ನೋಂದಣಿ ಕಛೇರಿ, ಚನ್ನಪಟ್ಟಣ | 1 |
| | **ಒಟ್ಟು** | **4** |

ಎಂಬುದಕ್ಕೆ ಬದಲಾಗಿ "ಜವಾನರು".

| ಕ್ರ.ಸಂ. | ಕಛೇರಿ ಹೆಸರು | ರದ್ದುಪಡಿಸಬೇಕಾದ ಹುದ್ದೆಗಳು |
|---|---|---|
| 1 | ಉಪ ನೋಂದಣಿ ಕಛೇರಿ, ಕನಕಪುರ | 1 |
| 2 | ಉಪ ನೋಂದಣಿ ಕಛೇರಿ, ದೊಡ್ಡಬಳ್ಳಾಪುರ | 1 |
| 3 | ಉಪ ನೋಂದಣಿ ಕಛೇರಿ, ದೇವನಹಳ್ಳಿ | 1 |
| 4 | ಉಪ ನೋಂದಣಿ ಕಛೇರಿ, ಹೊಸಕೋಟೆ | 1 |
| | **ಒಟ್ಟು** | **4** |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 1357 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಶಿಕ್ಷಣ ಸಚಿವಾಲಯ

**ವಿಷಯ:** ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ರಿಟ್ ಅರ್ಜಿ ಸಂಖ್ಯೆ: 16948/2004 (ಜಿ.ಎಂ/ಪಿಸಿಸಿ) ರಲ್ಲಿ ನ್ಯಾಯಾಲಯ ದಿನಾಂಕ: 16.04.2004 ರಂದು ನೀಡಿರುವ ಆದೇಶ.

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ: 25.06.2005.

3) ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ದಿನಾಂಕ: 20.08.2005.

**ಪ್ರಸ್ತಾವನೆ:**

ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿನ ಆಡಳಿತ ಮಂಡಳಿಯ ವಿವಾದವು ಪ್ರಸ್ತುತ ನ್ಯಾಯಾಲಯದಲ್ಲಿ ದಾಖಲಾಗಿದ್ದು, ಪ್ರಕರಣವು ನ್ಯಾಯಾಲಯದಲ್ಲಿ ಇತ್ಯರ್ಥವಾಗುವವರೆಗೆ ಹಾವೇರಿ ಉಪ ವಿಭಾಗಾಧಿಕಾರಿಯವರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 16.04.2004ರ ಅನ್ವಯ ನ್ಯಾಯಾಲಯ ಆದೇಶಿಸಲಾಗಿತ್ತು. ಆ ಪ್ರಕಾರ ಅಂದಿನ ಹಾವೇರಿ ಉಪ ವಿಭಾಗಾಧಿಕಾರಿಗಳಾದ ಶ್ರೀ ಬಿ.ಹೆಚ್. ಪೂಜಾರ್‌ರವರು ಆಡಳಿತಾಧಿಕಾರಿಯಾಗಿ ದಿನಾಂಕ: 14.05.2004 ರಿಂದ ಅಧಿಕಾರ ವಹಿಸಿಕೊಂಡಿದ್ದರು. ಶ್ರೀ ಬಿ.ಎಚ್. ಪೂಜಾರ್‌ರವರು ದಿನಾಂಕ: 28.02.2005 ರಂದು ವಯೋನಿವೃತ್ತಿ ಹೊಂದಿದ ಕಾರಣ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನದ ಸಹಾಯಕರು ಹೆಚ್ಚುವರಿ ಪ್ರಭಾರದಲ್ಲಿದ್ದ ಕಾರಣ ಮೇಲೆ ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ: 25.06.2005ರ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಸದರಿ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿತ್ತು. ಹಾವೇರಿ ಉಪ ವಿಭಾಗಾಧಿಕಾರಿ ಹುದ್ದೆಗೆ ರೆಗ್ಯುಲರ್ ವಿಭಾಗಾಧಿಕಾರಿಯನ್ನಾಗಿ ಶ್ರೀ ಡಿ.ಹೆಚ್. ಪಾಂಡುರಂಗನ್ ರವರನ್ನು ನೇಮಕ ಮಾಡಿದ್ದ ಕಾರಣ ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 20.08.2005ರ ಆದೇಶದಲ್ಲಿ ಶ್ರೀ ಡಿ.ಹೆಚ್. ಪಾಂಡುರಂಗನ್ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಯಿತು. ಇದೀಗ ಪುನಃ ಶ್ರೀ ಪಾಂಡುರಂಗನ್ ರವರು ವರ್ಗಾವಣೆಯಾಗಿದ್ದು, ಅವರ ಸ್ಥಾನದಲ್ಲಿ ಶ್ರೀ ಬಿ.ಹೆಚ್. ಸಿದ್ದಪ್ಪ ರವರನ್ನು ನೇಮಕ ಮಾಡಲಾಗಿದೆ. ಉಪ ವಿಭಾಗಾಧಿಕಾರಿಗಳು ಆಗಿಂದಾಗ್ಗೆ ವರ್ಗಾವಣೆ ಅಥವಾ ನಿಯೋಜನೆಗೊಳ್ಳುತ್ತಾರೆ. ಪದೇ ಪದೇ ಪ್ರತಿಯೊಂದು ಸಂದರ್ಭದಲ್ಲೂ ವರ್ಗಾವಣೆಗೊಂಡ ಅಧಿಕಾರಿ ಹೆಸರಿನಲ್ಲಿ ಆದೇಶ ಹೊರಡಿಸುವುದರಿಂದ, ಸದರಿ ಸಂಘದ ಆಡಳಿತಾಧಿಕಾರಿಯಾಗಿ ತನ್ನ ಕರ್ತವ್ಯವನ್ನು ಸಂದರ್ಭಾನುಸಾರ ನಿರ್ವಹಿಸಲು ತೊಡಕುವುಂಟಾಗುತ್ತದೆ. ಆದುದರಿಂದ, ಉಪ ವಿಭಾಗಾಧಿಕಾರಿಯನ್ನು ಅವರ ಹೆಸರಿನಲ್ಲಿ ಆಡಳಿತಾಧಿಕಾರಿಯಾಗಿ ನೇಮಕ ಮಾಡುವ ಬದಲು "ಹಾವೇರಿ ಉಪ ವಿಭಾಗಾಧಿಕಾರಿ" ಯನ್ನು (By Designation) ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್, ರಾಣೆಬೆನ್ನೂರು ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿಹೆಚ್ 2004, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2005**

ಮೇಲೆ ವಿವರಿಸಿದ ಕಾರಣಗಳಿಂದಾಗಿ ರಾಣೆಬೆನ್ನೂರಿನ ಭಾರತೀಯ ಆದಿಮಜಾತಿ ಸೇವಕ ಸಂಘ ಗ್ರೂಪ್ ಇಲ್ಲಿನ ಆಡಳಿತಾಧಿಕಾರಿಯನ್ನಾಗಿ ಹಾವೇರಿ ಉಪ ವಿಭಾಗಾಧಿಕಾರಿಯನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್. 1359 ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ನಿಚ್ಚಾಪುರ ಗ್ರಾಮದ ಕೆರೆ ನಿರ್ಮಾಣಕ್ಕೆ ಬೇಕಾಗುವ ಜಮೀನು ಭೂಸ್ವಾಧೀನ ಪಡಿಸಿಕೊಳ್ಳಲು ಶೇ.50 ರಷ್ಟು ಮುಂಗಡ ಹಣವನ್ನು ಠೇವಣಿ ಇಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 16.08.2005ರ ಪತ್ರ ಸಂಖ್ಯೆ: ಮುಇಂ/ಸನೀ(ದ)/ಲೆಶಾ:ಲೆಸ1:1:(2):ಭೂಸ್ವಾಧೀನ:2004-05/1753.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.08.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ/ದಕ್ಷಿಣ ವಲಯ, ಬೆಂಗಳೂರು ಇವರು ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ನಿಚ್ಚಾಪುರ ಗ್ರಾಮದ ಬಳಿ ಹೊಸಕೆರೆ ನಿರ್ಮಾಣಕ್ಕೆ ಬೇಕಾಗುವ ಒಟ್ಟು 17-80 ಎಕರೆ ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳುವ ಬಗ್ಗೆ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಪ್ರಕ್ರಿಯೆ ಪ್ರಾರಂಭಿಸಿ ಅಧಿಸೂಚನೆಯನ್ನು

ಹೊರಡಿಸುವ ಪೂರ್ವದಲ್ಲಿ ಒಟ್ಟು 34.08 ಲಕ್ಷ ರೂ.ಗಳನ್ನು ಠೇವಣಿ ಮಾಡಲು ಉಪವಿಭಾಗಾಧಿಕಾರಿಗಳು, ಹರಪನಹಳ್ಳಿ ರವರು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಚಿತ್ರದುರ್ಗ ಇವರಿಗೆ ದಿನಾಂಕ: 23.06.2005ರ ಪತ್ರ ಸಂಖ್ಯೆ: ಎಲ್ಎಕ್ಯೂ:ಸಿಆರ್/4/2005-06 ರಲ್ಲಿ ಪ್ರಸ್ತಾವನೆ ಕಳುಹಿಸಿರುವುದಾಗಿ ತಿಳಿಸಿ ಮುಂಗಡ ಹಣ ಬಿಡುಗಡೆ ಮಾಡಲು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 108 ಭೂಸ್ವಾಪ್ರ 2000, ದಿನಾಂಕ: 09.01.2000ರ ಅನುಸಾರ ಸಂಭವನೀಯ ಪರಿಹಾರಧನ ಮೊತ್ತದ ಶೇ.50 ರಷ್ಟನ್ನು ಠೇವಣಿ ಮಾಡಬೇಕಾಗಿದ್ದು, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 187 ಭೂಸ್ವಪ್ರ 2005, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ನಿಜ್ಜಾಪುರ ಗ್ರಾಮದ ಹೊಸಕೆರೆ ನಿರ್ಮಾಣಕ್ಕಾಗಿ ಅಗತ್ಯವಿರುವ ಒಟ್ಟು 47-80 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಪ್ರಕ್ರಿಯೆಗಾಗಿ ಪರಿಹಾರ ಮೊತ್ತದ ಶೇ.50 ರಷ್ಟು 17.04 ಲಕ್ಷ ರೂ.ಗಳನ್ನು (ಹದಿನೇಳು ಲಕ್ಷದ ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಮುಂಗಡ ಹಣವಾಗಿ ಉಪವಿಭಾಗಾಧಿಕಾರಿಗಳಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ: 12.06.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 1360

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ಅಳ್ಳೊಳ್ಳಿ ಗ್ರಾಮದ ಕರದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಕಾರ್ಯನಿರ್ವಾಹಕ ಇಂಜಿನಿಯರ್ ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ದಿನಾಂಕ: 18.06.2005ರ ಪತ್ರ ಸಂಖ್ಯೆ: ಕಾನಿಅ/ಸನೀವಿಗಂ/ಭೂಸ್ವಾ/2005-06/1570.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 18.06.2005ರ ಪತ್ರದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್ ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರು ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ಅಳ್ಳೊಳ್ಳಿ ಗ್ರಾಮದ ಕರದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾದ ಮಾನ್ಯ ಹೆಚ್ಚುವರಿ ಸಿವಿಲ್ ನ್ಯಾಯಾಲಯದ (ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.8,06,801/- ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 02.01.1994.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 6(1) ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 23.03.1995.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಅವಾರ್ಡ್ ಘೋಷಿಸಿದ ದಿನಾಂಕ: 15.02.1996.
- ಜಮೀನಿನ ಕಬ್ಬ ಪಡೆದ ದಿನಾಂಕ: 15.02.1996.

ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಧೀನ ಕಾಯ್ದೆ 18(1) ರನ್ವಯ ಗುಲ್ಬರ್ಗದ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ.

| ಕ್ರ. ಸಂ. | ಎಲ್.ಎ.ಸಿ. ಪ್ರಕರಣ ಸಂ. | ನ್ಯಾಯಾಲಯದ ಆದೇಶದ ದಿನಾಂಕ | ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ (ಬಡ್ಡಿ ಎಲ್ಲಾ ಅಂಶಗಳು ಸೇರಿ ಲೆಕ್ಕಾಚಾರ ತಃಖ್ತೆಯಂತೆ) |
|---|---|---|---|---|---|
| 1 | 59/99 | 30.11.2001 | 371 | 14-07 | 806801 |
| | | | | **ಒಟ್ಟು** | **806801** |

ಮೇಲ್ಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ಆಗಿದ್ದ ಆದೇಶಗಳ ಬಗ್ಗೆ ಕಾನೂನು ಇಲಾಖೆ ತಮ್ಮ ಪತ್ರ ಸಂಖ್ಯೆ: ಲಾ/50-ಎಲ್ಎಸ್‌ಜಿ 2002 ದಿನಾಂಕ: 22.01.2002 ರಂತೆ ಈ ಆದೇಶಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿದೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 113 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್ 2005**

ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ಅಳ್ಳೊಳ್ಳಿ ಗ್ರಾಮದ ಕರದಾಳ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದ ಆದೇಶದನ್ವಯ ಪರಿಹಾರಧನ ರೂ.8,06,801/- (ಎಂಟು ಲಕ್ಷದ ಆರು ಸಾವಿರದ ಎಂಟುನೂರ ಒಂದು ರೂಪಾಯಿಗಳು ಮಾತ್ರ) ಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕ 4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ: 12.06.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1361

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಎನ್.ಎಸ್. ರಾಮಾಂಜನೇಯಲು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಕೋಲಾರ ಜಿಲ್ಲೆ ಇವರ ಅಸಮರ್ಪಕ ಕಾರ್ಯನಿರ್ವಹಣೆ ಕುರಿತಂತೆ ಶಿಸ್ತು ಕ್ರಮ ಜರುಗಿಸಲು ಅಮಾನತ್ತಿನಲ್ಲಿರಿಸಲು ಕುರಿತಾದ ಆದೇಶ.

**ಓದಲಾಗಿದೆ:**
1. ಪತ್ರ ಸಂಖ್ಯೆ: ಹಿಂವನಿ/ಸಿಬ್ಬಂದಿ-1/ಸಿಆರ್-25/2005-06, ದಿನಾಂಕ: 08.09.2005 ಹಿಂದುಳಿದ ವರ್ಗಗಳ ಆಯುಕ್ತರಿಂದ ಬಂದಿರುತ್ತದೆ.
2. ಅರೆ ಸರ್ಕಾರಿ ಪತ್ರ ಸಂಖ್ಯೆ: ಹಿಂವನಿ/ಸಿಬ್ಬಂದಿ-1:ಸಿಆರ್-25:05-06, ದಿನಾಂಕ: 19.09.2005, ಹಿಂದುಳಿದ ವರ್ಗಗಳ ಆಯುಕ್ತರಿಂದ ಬಂದಿರುತ್ತದೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 08.09.2005 ಮತ್ತು ಕ್ರಮ ಸಂಖ್ಯೆ (2) ದಿನಾಂಕ: 19.09.2005ರ ಪತ್ರಗಳಲ್ಲಿ ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ವರದಿ ಮಾಡುತ್ತ ಶ್ರೀ ಎನ್.ಎಸ್. ರಾಮಾಂಜನೆಯಲು ಇವರು ಮೂಲತಃ ದೈಹಿಕ ಶಿಕ್ಷಣ ಅಧಿಕಾರಿಯಾಗಿ ಕಾಲೇಜು ಶಿಕ್ಷಣ ಇಲಾಖೆಗೆ ಸೇರಿದವರಾಗಿದ್ದು ಪ್ರಸ್ತುತ ಕೋಲಾರ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವರೆಂದು ಸದರಿಯವರು ಈ ಕೆಳಕಂಡ ಗುರುತರ ದುರುಪಯೋಗಗಳನ್ನು ಮಾಡಿರುವ ಕುರಿತು ವರದಿ ಮಾಡಿರುವರು.

1. 2004-05ನೇ ಸಾಲಿನ ವಿದ್ಯಾರ್ಥಿನಿಲಯಗಳ ಕಾರ್ಯನಿರ್ವಹಣೆಯಡಿ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಯ ಸಾಮಾನ್ಯ ಸಭೆಯ ಅನುಮೋದನೆ ಪಡೆಯದೆ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಇವರ ಅನುಮೋದನೆ ಇಲ್ಲದೆ ಅಧಿಕಾರ ವ್ಯಾಪ್ತಿ ಮೀರಿ 17,88,646 ರೂ.ಗಳ ಹಾಸಿಗೆ, ಹೊದಿಕೆ, ಪಾತ್ರೆ, ಪೀಠೋಪಕರಣಗಳು, ವಿದ್ಯಾರ್ಥಿನಿಲಯದ ಕಟ್ಟಡ ದುರಸ್ತಿ, ವೈರಿಂಗ್, ವಿದ್ಯುತ್ ಸಂಪರ್ಕ, ಪಂಪ್‌ಗಳ ದುರಸ್ತಿ, ಗ್ಯಾಸ್ ಲೈಟ್, ಟ್ರಂಕ್ಸ್, ಸೊಳ್ಳೆ ಪರದೆ, ರುಬ್ಬುವ ಯಂತ್ರ, ಪ್ರಥಮ ಚಿಕಿತ್ಸೆ ಪೆಟ್ಟಿಗೆಗಳು ಇತ್ಯಾದಿಗಳನ್ನು ಪಾರದರ್ಶಕತೆ ಕಾಯಿದೆಯನ್ನು ಉಲ್ಲಂಘಿಸಿ ಖರೀದಿಸಿ, ಹಣ ಅಧಿಕಾರ ದುರಪಯೋಗ ಮಾಡಿಕೊಂಡಿರುವ ಬಗ್ಗೆ.

2. 2004-05ನೇ ಸಾಲಿನ ಲೆಕ್ಕ ಶೀರ್ಷಿಕೆಯಲ್ಲಿ ಯೋಜನೇತರ ಅಡಿಯಲ್ಲಿ ವಿದ್ಯಾರ್ಥಿನಿಲಯಗಳ ನಿರ್ವಹಣೆಗೆ 267.26 ಲಕ್ಷ ಒದಗಿಸಲಾಗಿದ್ದು ಇದಕ್ಕೆ ವಿರುದ್ಧವಾಗಿ 457.12 ಲಕ್ಷ ಖರ್ಚು ಭರಿಸುವುದರ ಮೂಲಕ 189.86 ಲಕ್ಷ ಅನಧಿಕೃತವಾಗಿ ಹೆಚ್ಚುವರಿಯಾಗಿ ಖರ್ಚು ಮಾಡಿರುವ ಆರೋಪ.

3. ಜಿಲ್ಲಾ ಉಸ್ತುವಾರಿ ಅಧಿಕಾರಿಯಾದ ಶ್ರೀಯುತರು ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಯ ಸಾಮಾನ್ಯ ಸಭೆಯ ಅನುಮತಿ ಇಲ್ಲದೆ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಅನುಮೋದನೆ ಪಡೆಯದೆ ಅಧಿಕಾರ ವ್ಯಾಪ್ತಿ ಮೀರಿ ನರ್ಮದಾ ರೂರಲ್ ಡೆವಲಪ್‌ಮೆಂಟ್ ಸೊಸೈಟಿಯವರಿಂದ 2,99,975 ರೂ.ಗಳ ಖರೀದಿಯನ್ನು ಹಾಗೂ ಫೆಬ್ರವರಿ 5 ರಲ್ಲಿ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳು, ಬಾಗೇಪಲ್ಲಿರವರ ಮೂಲಕ 4,07,960 ರೂ.ಗಳ ಖರೀದಿಯನ್ನು ಯಾವುದೇ ಅನುಮೋದನೆ ಇಲ್ಲದೆ ಖರೀದಿಸಿ ಜಿಲ್ಲಾಧಿಕಾರಿಗಳ ಮೇಲೆ ಸಹಿ ಮಾಡಿರುತ್ತಾರೆ.

4. ಶ್ರೀಯುತರು ಅಧಿಕಾರ ವ್ಯಾಪ್ತಿ ಮೀರಿ ಪಾರದರ್ಶಕತೆ ಕಾಯಿದೆಯನ್ನು ಉಲ್ಲಂಘಿಸಿ ಕರ್ತವ್ಯ ಚ್ಯುತಿ ಎಸಗಿ ಜಿಲ್ಲಾ ಪಂಚಾಯತ್ ಅನುಮೋದನೆ ಇಲ್ಲದೆ ಜನತಾ ಬಜಾರ್ ಮೂಲಕ 89,457 ರೂ.ಗಳ ಪಾತ್ರೆ ಸಾಮಾನುಗಳನ್ನು ಖರೀದಿಸಿ ಅವ್ಯವಹಾರ ಎಸಗಿರುವರು.

5. ಯಾವುದೇ ಬೇಡಿಕೆ ಇಲ್ಲದೆ ಓಚರ್‌ಗಳನ್ನು ಸೃಷ್ಟಿಸಿ ವಿದ್ಯಾರ್ಥಿನಿಲಯಗಳ ನಿರ್ವಹಣೆ ಕಾರ್ಯಕ್ರಮದಡಿ ನಿಯಮ ಬಾಹಿರವಾಗಿ ವಿದ್ಯಾರ್ಥಿನಿಲಯಗಳಿಗೆ ಗಾಡಿಯಲ್ಲಿ ನೀರು ಸರಬರಾಜು ಮಾಡಿರುವುದಾಗಿ ಸುಮಾರು 1,42,500 ರೂ.ಗಳ ಮೇಲು ಸಹಿ ಮಾಡಿ ಅಧಿಕಾರ ದುರುಪಯೋಗ ಹಾಗೂ ಹಣ ದುರುಪಯೋಗ ಮಾಡಿರುವುದು ಕಂಡಬಂದಿದೆ.

ಶ್ರೀಯುತ ರಾಮಾಂಜನೇಯಲು ಇವರು ಕರ್ತವ್ಯ ನಿರ್ಲಕ್ಕೆ ಅಧಿಕಾರ ದುರುಪಯೋಗ, ನಿಯಮಗಳ ಉಲ್ಲಂಘನೆ, ಪಾರದರ್ಶಕ ಕಾಯಿದೆ ನಿಯಮಗಳ ದುರುಪಯೋಗ, ಸರ್ಕಾರಿ ನೌಕರನಲ್ಲದ ರೀತಿಯಲ್ಲಿ ಕಾರ್ಯನಿರ್ವಹಣೆ ಮಾಡಿರುವ ಅಂಶವು ಹಾಗೂ ಸದರಿ ಅಧಿಕಾರಿಯು ಹಣ ದುರುಪಯೋಗ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದನ್ನು ಸರ್ಕಾರವು ಗಮನಿಸಿ ಸದರಿ ಶ್ರೀ ಎನ್.ಎಸ್. ರಾಮಾಂಜನೇಯಲು, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಕೋಲಾರ ಜಿಲ್ಲೆ ಇವರನ್ನು ಇಲಾಖಾ ವಿಚಾರಣೆಗೆ ಒಳಪಡಿಸಲು ತಕ್ಷಣವೇ ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿರುವರು.

ಸರ್ಕಾರವು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 299 ಬಿಇಟಿ 2005, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2005**

ಸರ್ಕಾರವು ಹಿಂದುಳಿದ ವರ್ಗಗಳ ಇಲಾಖಾ ಆಯುಕ್ತರು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಶ್ರೀಯುತ ಎನ್.ಎಸ್. ರಾಮಾಂಜನೇಯಲು, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಕೋಲಾರ ಜಿಲ್ಲೆ ಇವರು ಜಿಲ್ಲಾ ಉಸ್ತುವಾರಿ ಅಧಿಕಾರಿಯಾಗಿ ಅಧಿಕಾರ ವ್ಯಾಪ್ತಿ ಮೀರಿ ಹಾಸಿಗೆ, ಹೊದಿಕೆ, ಪಾತ್ರೆ, ಪೀಠೋಪಕರಣಗಳು, ವಿದ್ಯಾರ್ಥಿನಿಲಯದ ಕಟ್ಟಡ ದುರಸ್ತಿ, ವೈರಿಂಗ್, ವಿದ್ಯುತ್ ಸಂಪರ್ಕ, ಪಂಪ್‌ಗಳ ದುರಸ್ತ, ಗ್ಯಾಸ್ ಲೈಟ್, ಟ್ರಂಕ್ಸ್, ಸೊಳ್ಳೆ ಪರದೆ, ರುಬ್ಬುವ ಯಂತ್ರ, ಪ್ರಥಮ ಚಿಕಿತ್ಸೆ ಪಟ್ಟಿಗೆಗಳು ಬೇಡಿಕೆ ಇಲ್ಲದೆ ಓಚರ್‌ಗಳನ್ನು

ಸೃಷ್ಟಿ ಮಾಡಿ ಲಕ್ಷಾಂತರ ರೂಪಾಯಿ ಹಣ ದುರುಪಯೋಗ ಮುಂತಾದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿದ್ದು ಶ್ರೀಯುತರ ಮೇಲೆ ಸೂಕ್ತ ಶಿಸ್ತಿನ ಕ್ರಮ ಜರುಗಿಸುವುದನ್ನು ಉದ್ದೇಶಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1)(ಎ) ಮೇರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಿ ಸರ್ಕಾರ ಆದೇಶಿಸಿದೆ.

ಶ್ರೀಯುತ ಎನ್.ಎಸ್. ರಾಮಾಂಜನೇಯಲುರವರು ಕೇಂದ್ರ ಸ್ಥಾನವನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆದು ಬಿಡತಕ್ಕದ್ದು.

ಶ್ರೀಯುತ ಎನ್.ಎಸ್. ರಾಮಾಂಜನೇಯಲುರವರು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಪ್ರಕಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮರುಳಸಿದ್ದಯ್ಯ**

ಪಿ.ಆರ್. 1364 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್ಎಂ 2005, ದಿನಾಂಕ: 27.05.2005.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್ಎಸ್ಆರ್:72:ಎಕ್ಸ್ಎಂಎ:2005-06, ದಿನಾಂಕ: 24.06.2005.

3) ಶ್ರೀ ಬಿ.ಎಸ್. ವಿಶ್ವನಾಥನ್ ರವರ ದಿನಾಂಕ: 08.07.2005ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1) ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಅನ್ನು ಮತ್ತಷ್ಟು ತಿದ್ದುಪಡಿ ಮಾಡುವ ಸಲುವಾಗಿ ಕೆಳಕಂಡ ವ್ಯಕ್ತಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿ ಸಹಕಾರ ಸಂಘಗಳ ನಿಬಂಧಕರನ್ನು ಸದರಿ ಸಮಿತಿಯ ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಿದೆ.

1. ಶ್ರೀ ಬಿ.ಎಸ್. ವಿಶ್ವನಾಥನ್, ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು.
2. ಶ್ರೀ ಎಂ.ಸಿ. ನಾಣಯ್ಯ, ಮಾಜಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು, ಮಡಿಕೇರಿ.
3. ಶ್ರೀ ಶಿವಾನಂದ ಪಾಟೀಲ್, ಶಾಸಕರು ಮತ್ತು ಅಧ್ಯಕ್ಷರು, ಡಿ.ಸಿ.ಸಿ. ಬ್ಯಾಂಕ್ ನಿ., ಬಿಜಾಪುರ.

ಮೇಲೆ ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸಮಿತಿಯ ಮೂವರು ಸದಸ್ಯರಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿ ನೇಮಿಸಬೇಕೆಂದು ಕೋರಿದ್ದಾರೆ. ಉಲ್ಲೇಖ (3)ರ ಪತ್ರದಲ್ಲಿ ಶ್ರೀ ಬಿ.ಎಸ್. ವಿಶ್ವನಾಥನ್ ಅವರು ಸದರಿ ಸಮಿತಿಯು ಪರಿಶೀಲಿಸಬೇಕಾದ ಅಂಶಗಳು ವಿಸ್ತೃತವಾಗಿದ್ದು, ಅಗತ್ಯವಾದರೆ ಹೊರ ರಾಜ್ಯಗಳಿಗೆ ಮತ್ತು ನವದೆಹಲಿಗೆ ಭೇಟಿ ನೀಡಬೇಕಾಗುತ್ತದೆಂದೂ ಸಮಿತಿಗೆ ನಿಗದಿಪಡಿಸಿರುವ ಅವಧಿಯು ಸಾಕಾಗದಿರುವುದರಿಂದ ಹೆಚ್ಚಿನ ಕಾಲಾವಕಾಶ ಅಗತ್ಯವಿರುತ್ತದೆಂದು ತಿಳಿಸಿ ದಿನಾಂಕ: 31.12.2005 ರವರೆಗೆ ಕಾಲಾವಕಾಶ ವಿಸ್ತರಿಸಬೇಕೆಂದೂ ಸದರಿ ಸಮಿತಿಗೆ ನಿವೃತ್ತ ಸಹಕಾರ ಸಂಘಗಳ ಅಪರ ನಿಬಂಧಕರಾದ ಶ್ರೀ ಎಂ.ಎಸ್. ಅಶ್ವತ್ಥನಾರಾಯಣ ಅವರನ್ನು ಸಹಕಾರ್ಯದರ್ಶಿಯನ್ನಾಗಿ ನೇಮಿಸಬೇಕೆಂದೂ ಹಾಗೂ ಸಮಿತಿಯ ಕಾರ್ಯ ಕಲಾಪಗಳಿಗೆ ತಗಲಬಹುದಾದ ಎಲ್ಲಾ ಆಡಳಿತಾತ್ಮಕ ವೆಚ್ಚಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಳವು ಭರಿಸಲು ಸೂಚಿಸಬೇಕೆಂದೂ ಕೋರಿದ್ದಾರೆ. ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 112 ಸಿಎಲ್ಎಂ 2005, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ ಮತ್ತಷ್ಟು ತಿದ್ದುಪಡಿ ಸಲಹೆ ಮಾಡಲು ರಚಿಸಿರುವ ತ್ರಿಸದಸ್ಯ ಸಮಿತಿಗೆ ಶ್ರೀ ಬಿ.ಎಸ್. ವಿಶ್ವನಾಥನ್, ಮಾಜಿ ಅಧ್ಯಕ್ಷರು ಮತ್ತು ಹಾಲಿ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ಇವರನ್ನು ಅಧ್ಯಕ್ಷರನ್ನಾಗಿ ಮತ್ತು ನಿವೃತ್ತ ಸಹಕಾರ ಸಂಘಗಳ ಅಪರ ನಿಬಂಧಕರಾದ ಶ್ರೀ ಎಂ.ಎಸ್. ಅಶ್ವತ್ಥನಾರಾಯಣ ಅವರನ್ನು ಸಹಕಾರ್ಯದರ್ಶಿಯನ್ನಾಗಿ ನೇಮಕ ಮಾಡುತ್ತದೆ. ಮುಂದುವರೆದು ಸದರಿ ಸಮಿತಿಯು ಅಗತ್ಯಬಿದ್ದರೆ ಹೊರ ರಾಜ್ಯಗಳಲ್ಲಿ ಪ್ರವಾಸ ಕೈಗೊಳ್ಳಬಹುದು ಮತ್ತು ಸಮಿತಿಯ ಕಾರ್ಯಕಲಾಪಗಳಿಗೆ ತಗಲುವ ಎಲ್ಲಾ ಆಡಳಿತಾತ್ಮಕ ವೆಚ್ಚಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಮಹಾಮಂಡಲವು ಭರಿಸತಕ್ಕದ್ದು ಎಂದು ಆದೇಶಿಸುತ್ತದೆ.

ಈ ಸಮಿತಿಯು ದಿನಾಂಕ: 31.12.2005 ರೊಳಗೆ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 1365 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸಿಕ ಸಂಶೋಧನಾ ಕೇಂದ್ರ ಕೆಳದಿ, ಸಾಗರ ತಾಲ್ಲೂಕು, ಇದನ್ನು ಕುವೆಂಪು ವಿಶ್ವ ವಿದ್ಯಾನಿಲಯಕ್ಕೆ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಕುಲಸಚಿವರು ಕುವೆಂಪು ವಿಶ್ವವಿದ್ಯಾಲಯ ಜ್ಞಾನ ಸಹ್ಯಾದ್ರಿ ಶಂಕರಘಟ್ಟ ಶಿವಮೊಗ್ಗ ಜಿಲ್ಲೆ– ಇವರ ಪತ್ರ ಸಂಖ್ಯೆ. ಕೆಯು/ಆರ್.ಇ.ಜಿ/ಎ.ಸಿ–4 2004/8021, ದಿನಾಂಕ: 26–2–2004.

2) ನಿರ್ದೇಶಕರು,ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ, ನಿರ್ದೇಶನಾಲಯ, ಇವರ ಪತ್ರ .ಸಂ.ಡಿ.ಎಂಂ: ಎಸಿಟಿ.3:ಕೆವಸಂ: 2003–04, ದಿನಾಂಕ:29.3.2003

3) ದಿನಾಂಕ: 25–2–2005 ರಂದು ಪ್ರಧಾನ ಕಾರ್ಯದರ್ಶಿಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಕುಲ ಸಚಿವರು ಕುವೆಂಪು ವಿಶ್ವ ವಿದ್ಯಾಲಯ ಇವರು, ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರವನ್ನು ಕುವೆಂಪು ವಿಶ್ವವಿದ್ಯಾಲಯದೊಂದಿಗೆ ವಿಲೀನಗೊಳಿಸುವ ಸಂಬಂಧ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಇವರು ಕುವೆಂಪು ವಿಶ್ವ ವಿದ್ಯಾಲಯವು ಕೆಳದಿ ವಸ್ತು ಸಂಗ್ರಹಾಲಯವನ್ನು ವಹಿಸಿಕೊಳ್ಳಲು ಆಸಕ್ತಿ ತೋರಿಸಿರುವುದರಿಂದ ಅದನ್ನು ವಿಶ್ವ ವಿದ್ಯಾನಿಲಯಕ್ಕೆ ವಿಲೀನಗೊಳಿಸಿ ಅದರ ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗಲು ಈ ಇಲಾಖೆಯ ಅಭ್ಯಂತರವೇನು ಇರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೇಲೆ ಓದಲಾದ (3)ರ ಸಭೆಯ ನಡವಳಿಯಲ್ಲಿ, ವಿಷಯ ಸಂಬಂಧ ಸವಿಸ್ತಾರವಾಗಿ ಚರ್ಚಿಸಲಾಗಿದೆ

ಈ ಹಿನ್ನಲೆಯಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರವನ್ನು ಕುವೆಂಪು ವಿಶ್ವ ವಿದ್ಯಾಲಯಕ್ಕೆ ವಿಲೀನಗೊಳಿಸುವ ಸಂಬಂಧ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 144 ಕೆಎಂಯು 2003 ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2005**

ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ ಶಿವಮೊಗ್ಗ ಜಿಲ್ಲೆ, ಇದನ್ನು ಕುವೆಂಪು ವಿಶ್ವ ವಿದ್ಯಾಲಯಕ್ಕೆ ಈ ಕೆಳಕಂಡ ಷರತ್ತಿಗೊಳಪಟ್ಟು ವಿಲೀನಗೊಳಿಸಿ ಆದೇಶಿಸಿದೆ.

(1) ಕೆಳದಿ ವಸ್ತು ಸಂಗ್ರಹಾಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಒಬ್ಬ ಕ್ಯೂರೇಟರ್, ಒಬ್ಬ ಅಸಿಸ್ಟೆಂಟ್ ಕ್ಯೂರೇಟರ್, ಗೈಡ್ ಮುಂತಾದ 7 ಸಿಬ್ಬಂದಿಗಳ ಸೇವಾ ವಿಷಯಕ್ಕೆ ಸಂಬಂಧಿಸಿದಂತೆ ವಿಶ್ವವಿದ್ಯಾನಿಲಯದಲ್ಲಿ ಪ್ರತ್ಯೇಕ ಭಾಗವಾಗಿ ಕಾರ್ಯನಿರ್ವಹಿಸುತ್ತದೆ. ಸಿಬ್ಬಂದಿಯ ನಿವೃತ್ತಿ ಹೊಂದಿದ ನಂತರ ಅವರಿಗೆ ವಿಶ್ರಾಂತಿ ವೇತನ, ಗ್ರಾಚ್ಯುಟಿ ಮುಂತಾದವುಗಳನ್ನು ರಾಜ್ಯ ಸರ್ಕಾರದಿಂದ ನೀಡಲಾಗುವುದಿಲ್ಲ. ಈ ಸಂಸ್ಥೆಯು ವಿಶ್ವ ವಿದ್ಯಾಲಯಕ್ಕೆ ವಿಲೀನವಾದ ನಂತರ ವಿಶ್ವವಿದ್ಯಾಲಯದವರು ಕಾನೂನಿನಂತೆ ನೌಕರರ ಭವಿಷ್ಯನಿಧಿಗೆ ನಿಗದಿಪಡಿಸಿದ ಮೊತ್ತವನ್ನು ತುಂಬಲು ಅನುವಾಗುವಂತೆ ಒಂದು ನಿರ್ಣಯವನ್ನು ವಿಶ್ವವಿದ್ಯಾಲಯದ ಮಟ್ಟದಲ್ಲಿ ತೆಗೆದುಕೊಳ್ಳುವುದು. ಅಲ್ಲದೆ ಅವರಿಗೆ ವೃಂದ ಮತ್ತು ನೇಮಕಾತಿಯನ್ನು ರೂಪಿಸಲು ಅಗತ್ಯ ಕ್ರಮ ಕೈಗೊಳ್ಳುವ ಮುನ್ನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಮತ್ತು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗಳ ಸಿಬ್ಬಂದಿಗಳ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಶೀಲಿಸಿ ಮುಂದಿನ ಅಗತ್ಯ ಕ್ರಮ ತೆಗೆದುಕೊಳ್ಳುವುದು.

(2) ಕೆಳದಿ ವಸ್ತು ಸಂಗ್ರಹಾಲಯವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ವಿಲೀನಗೊಳಿಸಿದ ನಂತರ ಪ್ರಾಚ್ಯವಸ್ತು, ಕಲೆ, ಸಂಶೋಧನೆ ಮುಂತಾದ ವಿಷಯಕ್ಕೆ ಸಂಬಂಧಿಸಿದಂತೆ ಮೂಲ ತರಗತಿಗಳನ್ನು ಅಂದರೆ ಡಿಪ್ಲೋಮೊ ಮುಂತಾದ ತರಗತಿಗಳನ್ನು ಪ್ರಾರಂಭ ಮಾಡಿ ಸಂಶೋಧನಾ ಪಾಠ ಪ್ರವಚನ ಕೇಂದ್ರವನ್ನಾಗಿ ಪರಿಗಣಿಸುವುದು. ಅಲ್ಲದೆ ಅದರಲ್ಲಿರುವ ಐತಿಹಾಸಿಕ ದಾಖಲೆಗಳು, ತಾಳೆಗರಿ, ತಿಗಳಾರಿ ಲಿಪಿಗೆ ಸಂಬಂಧಪಟ್ಟವುಗಳು, ಹಸ್ತ ಪ್ರತಿಗಳು: ಕೈ ಬರಹಗಳು ಮುಂತಾದವುಗಳ ಸಂರಕ್ಷಣೆಗಾಗಿ ರಾಜ್ಯ ಪತ್ರಾಗಾರ ಇಲಾಖೆಯಲ್ಲಿರುವಂತೆ ಕೇಂದ್ರ ಸರ್ಕಾರದ ಮ್ಯಾನ್‌ಸ್ಕ್ರಿಪ್ಟ್ ಮಿಶನ್ ಸಹಾಯ ಪಡೆದು ಸಂರಕ್ಷಿಸುವುದು.

(3) ಕೆಳದಿ ವಸ್ತು ಸಂಗ್ರಹಾಲಯದ ಆಸ್ತಿಗಳಾದ ಭೂಮಿ ಕಟ್ಟಡ ಮತ್ತಿತರ ವಸ್ತುಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರ ಹೆಸರಿನಿಂದ ಕುವೆಂಪು ವಿಶ್ವವಿದ್ಯಾಲಯದ ಹೆಸರಿಗೆ ವರ್ಗಾಯಿಸುವುದು. ಅಲ್ಲಿರುವ ತಾಳೆಗರಿ ಗ್ರಂಥಗಳು, ಸಂಗ್ರಹಿಸಿರುವ ಪ್ರಾಚ್ಯ ವಸ್ತುಗಳನ್ನು ವಿಶ್ವವಿದ್ಯಾಲಯದ ವಶಕ್ಕೆ ನೀಡುವುದು.

(4) ಕೆಳದಿ ವಸ್ತು ಸಂಗ್ರಹಾಲಯವನ್ನು ಕರ್ನಾಟಕ ರಾಜ್ಯ ವಿಶ್ವ ವಿದ್ಯಾಲಯ ಅಧಿನಿಯಮದಡಿ ತರುವುದು.

(5) ಕೆಳದಿ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಸಂಸ್ಥೆ ಶಿವಮೊಗ್ಗ ಜಿಲ್ಲೆ ಇದನ್ನು ಕುವೆಂಪು ವಿಶ್ವ ವಿದ್ಯಾಲಯಕ್ಕೆ ವಿಲೀನಗೊಳಿಸುವುದರಿಂದ ಉದ್ಭವಿಸುವ ಹೆಚ್ಚುವರಿ ವೆಚ್ಚವನ್ನು ವಿಶ್ವವಿದ್ಯಾಲಯವೇ ಭರಿಸತಕ್ಕದ್ದು.

ಈ ಆದೇಶವನ್ನು ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆಯ ಟಿಪ್ಪಣಿ ಸಂಖ್ಯೆ:848, ದಿನಾಂಕ: 28–3–2005 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 770 ವೆಚ್ಚ 5/2005 ದಿನಾಂಕ: 9–6–2005ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1366

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ. (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 20.9.1996.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 18.12.1996.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 23.8.1997.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 24.10.1998.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 9.9.1999.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 1996 ದಿನಾಂಕ: 12.10.2000 (ಭಾಗ).
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2003 ದಿನಾಂಕ: 3.6.2003.
8. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2004 ದಿನಾಂಕ: 19.5.2004.
9. ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಅಧೀನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮೂಅಇ 154 ಮೂಇವಿ 2003, ದಿನಾಂಕ: 13.9.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯನ್ನು ಹೊಸದಾಗಿ 25 ಸಿಬ್ಬಂದಿ ವರ್ಗದೊಂದಿಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಗೆ 2 ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಿಂದ (5) ರವರೆಗಿನ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (6)ರ ಆದೇಶದಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯ ಎಲ್ಲಾ ಹುದ್ದೆಗಳನ್ನು ದಿನಾಂಕ: 19.9.2001 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (7) ಮತ್ತು (8)ರ ಆದೇಶದಲ್ಲಿ ಕ್ರಮವಾಗಿ ಮೂಲಸೌಲಭ್ಯ ಇಲಾಖೆಯ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 31.3.2005 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರು ಎಲ್ಲ ಹುದ್ದೆಗಳನ್ನು ಮುಂದುವರೆಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 2004, ಬೆಂಗಳೂರು, ದಿನಾಂಕ: 23.9.2005**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮಂಜೂರಾಗಿರುವ 27 ಹುದ್ದೆಗಳನ್ನು ದಿನಾಂಕ: 19.9.2006 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1367

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**PERSONNEL AND ADMINISTRATIVE REFORMS SECRETARIAT**

**CORRIGENDUM No. DPAR 10 SMR 2005, Bangalore, Dated: 17th September 2005**

In Notification No. DPAR 1 SMR 2004, dated: 27.11.2004 for the words "Nethradhama Eye Hospital, Jayanagar, Bangalore" appearing in Sl.No.92 under item I the words "Nethradhama Super Speciality Eye Hospital, Jayanagar, Bangalore-560 082" shall be and shall always deemed to have been substituted and in Notification No. DPAR 10 SMR 2005 dated 30.7.2005 for the words "Akkur Speciality Hospital, Koramangala, Bangalore" appearing in Sl.No.125 under item I the words "Acura Speciality Hospital, Koramangala, Bangalore-560 095" shall be and shall always deemed to have been substituted.

By Order and in the name of the Governor of Karnataka,

**K. RAGHURAM BHANDARY**

P.R. 1368

Under Secretary to Government,

Department of Personnel and Administrative Reforms (Services-2).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಯನ್ನು ಪ್ರೋತ್ಸಾಹಿಸಲು ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಆಕುಕ 106 ಪಿಐಎಂ 98, ದಿನಾಂಕ: 27.4.2002.
2) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಭಾವೈಪ.16.ಅ(1).04-05, ದಿನಾಂಕ: 11.06.2004 ಮತ್ತು 28.1.2005.

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಯ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಆ ಪದ್ಧತಿಗಳಲ್ಲಿ ಸರ್ಕಾರಕ್ಕೆ ಸೂಕ್ತ ಸಲಹೆ ನೀಡುವ ಸಲುವಾಗಿ ಸರ್ಕಾರವು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಎರಡು ವರ್ಷಗಳ ಅವಧಿಗೆ ರಚಿಸಿತ್ತು.

ಮೇಲೆ ಓದಲಾದ (2) ರಲ್ಲಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪದ್ಧತಿಯನ್ನು ಪ್ರೋತ್ಸಾಹಿಸಲು ಈ ಹಿಂದೆ ರಚಿಸಲಾಗಿದ್ದು ಸಮಿತಿಯ ಅವಧಿಯು ದಿನಾಂಕ: 26.4.2004ಕ್ಕೆ ಮುಗಿದಿರುವುದರಿಂದ ಸದರಿ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ. ಸರ್ಕಾರವು ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 307 ಪಿಐಎಂ 2004, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಜ್ಯದಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಚಿಕಿತ್ಸೆ ಪದ್ಧತಿಯನ್ನು ಪ್ರೋತ್ಸಾಹಿಸಲು ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಎರಡು ವರ್ಷಗಳ ಅವಧಿಗೆ ಪುನರ್ ರಚಿಸಿದೆ.

| | | |
|---|---|---|
| 01 | ಹೋ. ಶ್ರೀನಿವಾಸಯ್ಯ,<br>ಅಧ್ಯಕ್ಷರು, ಪ್ರಕೃತಿ ಜೀವನ ಕೇಂದ್ರ, 8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3 | ಅಧ್ಯಕ್ಷರು |
| 02 | ಡಾ: ವೈ. ರುದ್ರಪ್ಪ,<br>ಮುಖ್ಯ ವೈದ್ಯಾಧಿಕಾರಿಗಳು, ಎಸ್.ಡಿ.ಎಂ. ಪ್ರಕೃತಿ ಮತ್ತು ಯೋಗ ಆಸ್ಪತ್ರೆ, ಧರ್ಮಸ್ಥಳ, ದ.ಕ. ಜಿಲ್ಲೆ. | ಸದಸ್ಯರು |
| 03 | ಡಾ: ಎಂ.ಎನ್. ರಾಮನ್,<br>ನಿರ್ದೇಶಕರು, ಪ್ರಕೃತಿ ಮತ್ತು ಯೋಗ ಚಿಕಿತ್ಸಾ ವಿಭಾಗ, ಜೆ.ಎಸ್.ಎಸ್. ವಿದ್ಯಾಪೀಠ,<br>ರಾಮಾನುಜಂ ರಸ್ತೆ, ಮೈಸೂರು-4. | ಸದಸ್ಯರು |

| | | |
|---|---|---|
| 04 | ಶ್ರೀಮತಿ ಬಿ.ಸಿ. ಭಾಗ್ಯ,<br>ಆರೋಗ್ಯ ಮಂದಿರ, 148, 1ನೇ ಆರ್. ಬ್ಲಾಕ್, ರಾಜಾಜಿನಗರ, ಬೆಂಗಳೂರು-10 | ಸದಸ್ಯರು |
| 05 | ಶ್ರೀಮತಿ ಸಮತಾ ರಾಣಿ,<br>ಯೋಗ ವಿದ್ಯಾಲಯ, ಗಾಯತ್ರಿ ಬಡಾವಣೆ, ಬಸವೇಶ್ವರ ನಗರ, ಬೆಂಗಳೂರು. | ಸದಸ್ಯರು |
| 06 | ಶ್ರೀ ಎಲ್.ಎ. ಬಾಲಕೃಷ್ಣ, ಎಂ.ಇ.<br>SOMBO Institute for soul Mind & mody Development,<br>ನಂ.1064, 36ನೇ ಕ್ರಾಸ್, 4ನೇ ಟಿ.ಬ್ಲಾಕ್, ಜಯನಗರ, ಬೆಂಗಳೂರು-41. | ಸದಸ್ಯರು |
| 07 | ಶ್ರೀ ಚಿದಾನಂದಮೂರ್ತಿ,<br>ನಿರ್ದೇಶಕರು, ರಾಷ್ಟ್ರೀಯ ಪ್ರಕೃತಿ ಚಿಕಿತ್ಸಾ ಸಂಸ್ಥಾನ, ರಮಾಬಾಯಿ, ಅಂಬೇಡ್ಕರ್ ರಸ್ತೆ, ಪುಣೆ. | ಸದಸ್ಯರು |
| 08 | ಶ್ರೀ ಉಮೇಶ್ವರ,<br>ನಂ.228, 4ನೇ ಕ್ರಾಸ್, ಕೆ.ಹೆಚ್.ಬಿ. ಕಾಲೋನಿ, ಕೋರಮಂಗಲ, ಬೆಂಗಳೂರು-96. | ಸದಸ್ಯರು |
| 09 | ಡಾ: ಎಂ.ಎಲ್. ಪಾಟೀಲ್ ಎಂ.ಬಿ.ಬಿ.ಎಸ್.,<br>ಪಂಪಾ ಹೌಸಿಂಗ್ ಕಾಲನಿ, ಮಾನ್ವಿ, ರಾಯಚೂರು ಜಿಲ್ಲೆ. | ಸದಸ್ಯರು |
| 10 | ಡಾ: ಸತ್ಯನಾರಾಯಣ ಮೂರ್ತಿ,<br>ಮುಖ್ಯ ವೈದ್ಯಾಧಿಕಾರಿಗಳು, ಜಿಂದಾಲ್, ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಆಸ್ಪತ್ರೆ, ಜಿಂದಾಲ್ ನಗರ,<br>ತುಮಕೂರು ರಸ್ತೆ, ಬೆಂಗಳೂರು-73. | ಸದಸ್ಯರು |
| 11 | ನಿರ್ದೇಶಕರು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು-9 | ಸದಸ್ಯರು |
| 12 | ನಿರ್ದೇಶಕರು,<br>ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಧನ್ವಂತರಿ ರಸ್ತೆ, ಬೆಂಗಳೂರು-9. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 1369

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತ (KAIC)ರ ಹರಳು ಮಿಶ್ರಣ ಘಟಕವನ್ನು (GMP) ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತ (KSCMF)ರ ವರ್ಗಾವಣೆ/ಮಾರಾಟ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 30 ಎಎಫ್‌ಟಿ 2004, ದಿನಾಂಕ: 20.10.2004.

**ಪ್ರಸ್ತಾವನೆ:**

ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತವು ಬೆಂಗಳೂರಿನ ಹೂಸೂರು ರಸ್ತೆಯ ಹರಳುಕುಂಟೆಯಲ್ಲಿರುವ ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮದ ಆವರಣದಲ್ಲಿ 2000-01 ರಲ್ಲಿ ಒಂದು ಸಾವಯವ ಗೊಬ್ಬರ ಮಿಶ್ರಣ ಸ್ಥಾವರವನ್ನು ಸ್ಥಾಪಿಸಿ ರೂ.300.00 ಲಕ್ಷಗಳನ್ನು ಬಂಡವಾಳವನ್ನು ಹೂಡಲಾಗಿತ್ತು. ಈ ಸ್ಥಾವರದ ಸ್ಥಾಪನೆಗೆ ರಾಜ್ಯ ಸರ್ಕಾರವು 100.00 ಲಕ್ಷಗಳಷ್ಟು ಅನುದಾನವನ್ನು ನೀಡಿತ್ತು. ಹಾಗೂ ಪ್ರತಿದಿನ 80 ರಿಂದ 100 ಮೆಟ್ರಿಕ್ ಟನ್ ಉತ್ಪಾದನೆಯ ಗುರಿ ಹೊಂದಲಾಗಿತ್ತು.

ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತವು ಉತ್ಪಾದಿಸುತ್ತಿದ್ದ ಹರಳು ರೂಪದ ಅಗ್ರಿಗೋಲ್ಡ್ ಸಾವಯವ ಗೊಬ್ಬರವನ್ನು ಕೃಷಿ ಇಲಾಖೆ ರೈತ ಸಂಪರ್ಕ ಕೇಂದ್ರಗಳ ಮೂಲಕ ವಿತರಿಸುತ್ತಿದ್ದು. ಕೃಷಿ ಇಲಾಖೆಯು 2001-02 ರಿಂದ 2003-04ನೇ ಸಾಲಿನವರೆಗೆ ಅಗ್ರಿ ಗೋಲ್ಡ್ ಸಾವಯವ ಗೊಬ್ಬರ ವಿತರಣೆಯ ಸಲುವಾಗಿ ರೂ.225-00 ಲಕ್ಷಗಳಷ್ಟು ಅನುದಾನವನ್ನು ನೀಡಲಾಗಿತ್ತು.

ಸರ್ಕಾರದ ಆದೇಶ ಸಂಖ್ಯೆ: ಡಿಡಿಪಿಇಆರ್ 55 ಎಆರ್‌ಯು 2003 ದಿನಾಂಕ: 3.9.2003ರ ಪ್ರಕಾರ ಕರ್ನಾಟಕ ಕೃಷಿ ಕೈಗಾರಿಕಾ ನಿಗಮವನ್ನು ಕಾನೂನು ಪ್ರಕ್ರಿಯೆಗಳಿಗನುಸಾರ ತಕ್ಷಣ ಜಾರಿಗೆ ಬರುವಂತೆ ಮುಚ್ಚಲು ಪರವಾನಗಿ ನೀಡಿದೆ. ಅದರಂತೆ ಸಂಸ್ಥೆಯಲ್ಲಿರುವ ಎಲ್ಲಾ ನೌಕರರನ್ನು (ಅಗ್ರಿಗೋಲ್ಡ್ ಸ್ಥಾವರವನ್ನು ಒಳಗೊಂಡಂತೆ) ಸ್ವಯಂ ನಿವೃತ್ತಿಗೊಳಿಸಲಾಗಿದೆ. ಆದ್ದರಿಂದ ಅಗ್ರಿಗೋಲ್ಡ್ ಸ್ಥಾವರದಲ್ಲಿ ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತದ ಯಾವುದೇ ನೌಕರರು ಕಾರ್ಯ ನಿರ್ವಹಿಸುತ್ತಿಲ್ಲ.

ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತ ಸಂಸ್ಥೆಯನ್ನು ಸಮಾಪನೆಗೊಳಿಸಿರುವುದರಿಂದ ಅಗ್ರಿಗೋಲ್ಡ್ ಹರಳು ಮಿಶ್ರಣ ಘಟಕ ಸ್ಥಗಿತಗೊಂಡಿತ್ತು. ಆದ್ದರಿಂದ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಅಗ್ರಿಗೋಲ್ಡ್ ಸಾವಯವ ಗೊಬ್ಬರವನ್ನು ತಯಾರಿಸುವ ಸಲುವಾಗಿ ಮಾಹೆಯಾನ ರೂ.1.5 ಲಕ್ಷಗಳ ಗುತ್ತಿಗೆ ಆಧಾರದ ಮೇಲೆ ಅಗ್ರಿಗೋಲ್ಡ್ ಸ್ಥಾವರವನ್ನು ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತದಿಂದ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತಕ್ಕೆ ಹಸ್ತಾಂತರಿಸಲಾಗಿದೆ.

ಅಗ್ರಿಗೋಲ್ಡ್ ಸ್ಥಾವರದ ಪೂರ್ಣ ಸ್ವತ್ತು ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತ ಇವರಿಗೆ ಸೇರಿದ್ದು, ಸದರಿ ಸ್ವತ್ತನ್ನು ಪರಭಾರೆ ಮಾಡುವ ಬಗ್ಗೆ ಕರ್ನಾಟಕ ಕೃಷಿ ಕೈಗಾರಿಕಾ ನಿಗಮ, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ಹಾಗೂ ಕರ್ನಾಟಕ ಕಾಂಪೋಸ್ಟ್ ಅಭಿವೃದ್ಧಿ ನಿಗಮ ಇವುಗಳನ್ನೊಳಗೊಂಡಂತೆ ತ್ರಿಪಕ್ಷೀಯ ಒಡಂಬಡಿಕೆ ಏರ್ಪಡಿಸಿದ್ದು, ಟೆಕ್‌ಸೋಕ್ ಸಂಸ್ಥೆಯು ನಿಗದಿಪಡಿಸಿರುವ ಮೌಲ್ಯಮಾಪನದ ಅನುಸಾರ ರೂ.190.80 ಲಕ್ಷಗಳ ದರ ನಿಗದಿಪಡಿಸಿದೆ. ಈ ವಿಚಾರವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ್ದು, ಮೊದಲನೆಯದಾಗಿ ಮಾಹೆಯಾನ ರೂ.1.5 ಲಕ್ಷಗಳ ಗುತ್ತಿಗೆ ಆಧಾರದ ಮೇಲೆ ಅಗ್ರಿಗೋಲ್ಡ್ ಸ್ಥಾವರವನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತಕ್ಕೆ

ಹಸ್ತಾಂತರಿಸುವ ಕ್ರಮವನ್ನು ಅನುಸಮರ್ಥಿಸಿ ಸದರಿ ಸ್ವತ್ತನ್ನು ಟೆಕ್‌ಸೋಕ್ ಸಂಸ್ಥೆಯು ಈಗಾಗಲೇ ಮಾಡಿರುವ ಮೌಲ್ಯಮಾಪನದ ಅನುಸಾರ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಕ್ಕೆ ಕ್ರಯ ಆಧಾರಿತ ಪರಭಾರೆ ಮಾಡಲು ನಿರ್ಧರಿಸಿದೆ. ಹಾಗೂ ಪರಭಾರೆ ಪ್ರಕ್ರಿಯೆಗಳು ಅಂತಿಮಗೊಳ್ಳುವವರೆಗೆ ಮಾಹೆಯಾನ ರೂ.1.5 ಲಕ್ಷಗಳ ಗುತ್ತಿಗೆಯನ್ನು ಮುಂದುವರಿಸಲು ಸಹ ನಿರ್ಧರಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 34 ಎಎಫ್‌ಟಿ 2004, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೃಷಿ ಕೈಗಾರಿಕಾ ನಿಗಮ ನಿಯಮಿತದ ವಶದಲ್ಲಿದ್ದ ಅಗ್ರಿಗೋಲ್ಡ್ ಹರಳು ಮಿಶ್ರಣ ಸ್ಥಾವರನವನ್ನು ಮಾಹೆಯಾನ ರೂ.1.5 ಲಕ್ಷಗಳ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ನಿಯಮಿತ ಇವರಿಗೆ ಹಸ್ತಾಂತರಿಸಲಾಗಿದ್ದ ಕ್ರಮವನ್ನು ಅನುಸಮರ್ಥಿಸಲಾಗಿದೆ.

ಬೆಂಗಳೂರಿನ ಹೊಸೂರು ರಸ್ತೆಯ ಹರಳಕುಂಟೆಯಲ್ಲಿರುವ ಅಗ್ರಿಗೋಲ್ಡ್ ಸಾವಯವ ಗೊಬ್ಬರ ಸ್ಥಾವರವನ್ನು (ಪೂರ್ಣ ಪ್ರಮಾಣದಲ್ಲಿ) ಟೆಕ್‌ಸೋಕ್ ಸಂಸ್ಥೆಯ ಮಾಡಿರುವ ಮೌಲ್ಯಮಾಪನದ ಅನುಸಾರ ರೂ.190-80 ಲಕ್ಷಗಳಿಗೆ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ ಇವರಿಗೆ ಕ್ರಯ ಆಧಾರಿತ ಪರಭಾರೆ ಮಾಡಲು ಸರ್ಕಾರದ ಅನುಮತಿ ನೀಡಿದೆ. ಉಭಯತರರು ಪರಭಾರೆ ಪ್ರಕ್ರಿಯೆಗಳನ್ನು ಶೀಘ್ರವಾಗಿ ಪೂರೈಸಿ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

ಪರಭಾರೆ ಪ್ರಕ್ರಿಯೆಗಳು ಪೂರ್ಣಗೊಳ್ಳುವವರೆಗೆ ಮಾಹೆಯಾನ ರೂ.1.5 ಲಕ್ಷಗಳ ಗುತ್ತಿಗೆ ಆಧಾರಿತ ಕ್ರಮವನ್ನು ಮುಂದುವರಿಸುವುದು.

ಈ ಆದೇಶವನ್ನು ಸಚಿವ ಸಂಪುಟ ಸಭೆಯ ಟಿಪ್ಪಣಿ ಸಂಖ್ಯೆ: ಸಿ 232 2005 ದಿನಾಂಕ: 27.07.2005ರ ಮೂಲಕ ಸಚಿವ ಸಂಪುಟದ ಅನುಮೋದನೆ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಪಿ.ಆರ್. 1370 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ-ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2005**

ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರನ್ನು ಸರ್ಕಾರದ ಆದೇಶ ಕ್ರಮ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 2005, ದಿನಾಂಕ: 09.05.2005 ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ವಿಚಾರಣೆ ಕಾಯ್ದಿರಿಸಿ ಅಮಾನತ್ತನ್ನು ರದ್ದುಗೊಳಿಸಿ ಅವರನ್ನು ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಸರ್ಕಾರವು ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧದ ಲೋಕಾಯುಕ್ತ ವಿಚಾರಣೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ಕೂಡಲೇ ಜಾರಿಗೆ ಬರುವಂತೆ ಮುಕ್ತಾಯಗೊಳಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರಿಗೆ ಸೂಕ್ತ ಹುದ್ದೆ ನೀಡಲು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2) ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1371 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್, (ಅಮಾನತ್ತಿನಲ್ಲಿ) ಅವರ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ತೆಗೆದುಕೊಳ್ಳುವ ಬಗ್ಗೆ-ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2005**

ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್, ಕೃಷ್ಣ ಭಾಗ್ಯ ಜಲ ನಿಗಮ (ಅಮಾನತ್ತಿನಲ್ಲಿ) ಅವರನ್ನು ಸರ್ಕಾರದ ಆದೇಶ ಕ್ರಮ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 2005, ದಿನಾಂಕ: 11.04.2005 ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್, ಕೃಷ್ಣ ಭಾಗ್ಯ ಜಲ ನಿಗಮ (ಅಮಾನತ್ತಿನಲ್ಲಿ) ಅವರ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತನ್ನು ರದ್ದುಗೊಳಿಸಿ ಅವರನ್ನು ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಸರ್ಕಾರವು ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ಕೂಡಲೇ ಜಾರಿಗೆ ಬರುವಂತೆ ಮುಕ್ತಾಯಗೊಳಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್ ಅವರಿಗೆ ಸೂಕ್ತ ಹುದ್ದೆ ನೀಡಲು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2) ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1372 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಡಿ.ಡಿ.ಪಿ.ಇ.ಆರ್. ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 443 ಎಸ್ಎಎಸ್ 2005, ದಿನಾಂಕ: 30.8.2005.

2. ಟಿಪ್ಪಣಿ ಸಂಖ್ಯೆ: ಪ್ರ.ಕಾ./ಆಶಾ/584/2005, ದಿನಾಂಕ: 22.9.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 30.8.2005ರ ಅಧಿಸೂಚನೆಯಲ್ಲಿ ಡಾ: ಐ. ದೇವೇಂದ್ರನ್, ಐ.ಎ.ಎಸ್. ಅವರನ್ನು ಡಿ.ಡಿ.ಪಿ.ಇ.ಆರ್. ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 22.9.2005ರ ಟಿಪ್ಪಣಿಯಲ್ಲಿ ಡಾ: ಐ. ದೇವೇಂದ್ರನ್, ಐ.ಎ.ಎಸ್. ರವರು ಡಿ.ಡಿ.ಪಿ.ಇ.ಆರ್. ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಿ ಆದೇಶಿಸಲು ಪ್ರಸ್ತಾಪಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಡಿ.ಡಿ.ಪಿ.ಇ.ಆರ್. ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮರುಪದನಾಮೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಸಸಿವಿ 2005, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಡಿ.ಡಿ.ಪಿ.ಇ.ಆರ್. ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಡಾ: ಐ. ದೇವೇಂದ್ರನ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕ: 1.9.2005 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ನಿಗದಿಪಡಿಸಿರುವಂತೆ ಇವರ ಆಪ್ತ ಶಾಖೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ನಿಗದಿಪಡಿಸಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್. 1373

**ವಿಷಯ:** ಶ್ರೀಮತಿ ಸಿದ್ದಮ್ಮ ಗಂಡ ಲೇಟ್ ಗುಂಡಪ್ಪ ಕಾಳಪ್ಪ ಬೀದರ್ ಇವರಿಗೆ ಗೋವಾ ವಿಮೋಚನಾ ಚಳುವಳಿಯ ಗೌರವಧನ ಬಾಕಿ ಹಣ ಮಂಜೂರಾತಿಯ ಬಗ್ಗೆ.

**ಓದಲಾಗಿದೆ:**

1) ದಿನಾಂಕ: 29.1.1991ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1347 ಪಿಎಫ್ಎಸ್ 87.
2) ದಿನಾಂಕ: 12.8.1991ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1347 ಪಿಎಫ್ಎಸ್ 87.
3) ದಿನಾಂಕ: 2.11.1992ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1136 ಪಿಪಿಜಿ 92.
4) ದಿನಾಂಕ: 5.4.1993ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4254 ಪಿಪಿಜಿ 92.
5) ದಿನಾಂಕ: 8.7.93ರ ಶ್ರೀ ಜಿ.ಎಲ್. ರಾಮರೆಡ್ಡಿಯವರ ಪತ್ರ.
6) ದಿನಾಂಕ: 2.4.94ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92.
7) ದಿನಾಂಕ: 19.4.95ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92.
8) ದಿನಾಂಕ: 13.7.94 ರಂದು ರಿಟ್ ಅರ್ಜಿ ಸಂಖ್ಯೆ: 15125-223/94 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ.
9) ದಿನಾಂಕ: 15.1.97 ರಂದು ರಿಟ್ ಮೇಲ್ಮನವಿ ಸಂಖ್ಯೆ: 52-179, 2879-966, 3367-97, 3286-301/95, ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಮಾನ.
10) ದಿನಾಂಕ: 29.11.97ರ ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 09 ಪಿಪಿಜಿ 97.
11) ದಿನಾಂಕ: 26.2.2001 ಮತ್ತು 25.8.2003ರ ಬೀದರ್ ಜಿಲ್ಲೆಯ ಶ್ರೀಮತಿ ಸಿದ್ದಮ್ಮ ಗಂಡ ಲೇಟ್ ಗುಂಡಪ್ಪ ಕಾಳಪ್ಪ, ದುಲ್ಹನ್ ದರ್ವಾಜಾ ಮನೆ ನಂ.5/3/76 ಬೀದರ್ ರವರ ಅರ್ಜಿ.

**ಪ್ರಸ್ತಾವನೆ:**

ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 29.1.91ರ ಸರ್ಕಾರದ ಆದೇಶದಲ್ಲಿ ದಿನಾಂಕ: 21.02.69ರ ಸರ್ಕಾರದ ಆದೇಶದಲ್ಲಿ ಜಾರಿಗೆ ತಂದ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಪರಿಯೋಜನೆ 1969ಕ್ಕೆ ತಿದ್ದುಪಡಿ ಮಾಡಿ 1955-56ರ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದವರಿಗೆ ಗೌರವಧನ ಮಂಜೂರು ಮಾಡಲು ಅವಕಾಶ ಕಲ್ಪಿಸಿ ಆ ಯೋಜನೆಯನ್ನು ದಿನಾಂಕ: 1.1.1991 ರಿಂದ ಜಾರಿಗೊಳಿಸಲಾಗಿತ್ತು.

ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಅಧಿಕೃತ ದಾಖಲೆಗಳು ಲಭ್ಯವಿಲ್ಲದ ಕಾರಣದಿಂದಾಗಿ ಉಲ್ಲೇಖ (2) ರಲ್ಲಿ ಓದಲಾದ ದಿನಾಂಕ: 12.08.91ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ.ಎಲ್. ರಾಮರೆಡ್ಡಿಯವರನ್ನು ತಂಡದ ನಾಯಕರನ್ನಾಗಿ ನೇಮಿಸಿ ಅವರು ಪ್ರಮಾಣಪತ್ರ ನೀಡಿದವರಿಗೆ ಸಲಹಾ ಸಮಿತಿಯ ಅಭಿಪ್ರಾಯದೊಂದಿಗೆ ಗೌರವಧನ ಮಂಜೂರು ಮಾಡಲಾಗುತ್ತಿತ್ತು.

ಗೋವಾ ವಿಮೋಚನಾ ಚಳುವಳಿಗಾರರ ಹತ್ತಿರ ಯಾವುದೇ ರೀತಿಯ ದಾಖಲಾತಿಗಳು ಇಲ್ಲದಿದ್ದುದರಿಂದಲೂ ಹಾಗೂ ಕೇವಲ ತಂಡದ ನಾಯಕರಾದ ಶ್ರೀ ಜಿ.ಎಲ್. ರಾಮರೆಡ್ಡಿಯವರು ನೀಡಿದ ಪ್ರಮಾಣ ಪತ್ರದ ಮೇರೆಗೆ ಗೌರವಧನವನ್ನು ಮಂಜೂರು ಮಾಡಬೇಕಾದ ಪರಿಸ್ಥಿತಿ ಇದ್ದುದರಿಂದ, ಈ ಯೋಜನೆಯು ಸಾಕಷ್ಟು ದುರುಪಯೋಗಗೊಂಡು ವಿಧಾನ ಮಂಡಲದ ಉಭಯ ಸದನಗಳಲ್ಲಿಯೂ ಕೂಡ ಇದರ ವ್ಯಾಪಕ ದುರ್ಬಳಕೆ ಬಗ್ಗೆ ಚರ್ಚಿಸಲಾಯಿತು.

ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ: 2.11.1992ರ ಸರ್ಕಾರದ ಆದೇಶದಲ್ಲಿ ಬೀದರ್ ಜಿಲ್ಲೆ, ಬೀದರ್‌ನ ಶ್ರೀ ಗುಂಡಪ್ಪ ಬಿನ್ ಕಾಳಪ್ಪನವರಿಗೆ ದಿನಾಂಕ: 1.1.91 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಗೋವಾ ಗೌರವಧನವನ್ನು ಮಂಜೂರು ಮಾಡಲಾಗಿತ್ತು.

ಉಲ್ಲೇಖ (4) ರಲ್ಲಿ ಓದಲಾದ ದಿನಾಂಕ: 5.4.93ರ ಸರ್ಕಾರದ ಆದೇಶದಲ್ಲಿ ಯೋಜನೆಯು ಸಮರ್ಪಕವಾಗಿ ಕೆಲಸ ಮಾಡದ ಕಾರಣ, ಸರ್ಕಾರವು ಈ ಯೋಜನೆಯನ್ನು ಸಮಗ್ರವಾಗಿ ಪುನರ್ ಅವಲೋಕಿಸಿ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳಿಗೆ ಗೌರವಧನ ಮಂಜೂರು ಮಾಡುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಲ್ಲಿಸಲಾಯಿತು.

ಉಲ್ಲೇಖ (5) ರಲ್ಲಿ ಓದಲಾದ ದಿನಾಂಕ: 8.7.93ರ ತಮ್ಮ ಪತ್ರದಲ್ಲಿ ಶ್ರೀ ಜಿ.ಎಲ್. ರಾಮರೆಡ್ಡಿರವರು ತಮ್ಮ ಸಹಿಯನ್ನು ಫೋರ್ಜರಿ ಮಾಡಲಾಗಿದೆ ಎಂದು ತಿಳಿಸಿದ್ದರು.

ಗೋವಾ ಗೌರವಧನ ಮಂಜೂರಾದವುಗಳಲ್ಲಿ ಬಹುತೇಕ ಪ್ರಕರಣಗಳು ಸುಳ್ಳೆಂದು ಸಚಿವರು, ಶಾಸಕರು ಹಾಗೂ ಇತರೆ ಗಣ್ಯ ವ್ಯಕ್ತಿಗಳು ಸಹ ದೂರುಗಳನ್ನು ಸಲ್ಲಿಸಿದ ಕಾರಣ ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಉಲ್ಲೇಖ (6) ರಲ್ಲಿ ಓದಲಾದ ದಿನಾಂಕ: 2.4.94ರ ಸರ್ಕಾರದ ಆದೇಶದಲ್ಲಿ ಅದಕ್ಕೆ ಲಗತ್ತಿಸಿದ್ದ ಅನುಬಂಧದಲ್ಲಿ ನಮೂದಿಸಿದ್ದ 1943 ಆದೇಶಗಳಲ್ಲಿ ಮಂಜುರಾಗಿದ್ದ ಎಲ್ಲಾ ಗೋವಾ ವಿಮೋಚನಾ ಚಳುವಳಿಗಾರರ ಗೌರವಧನವನ್ನು ದಿನಾಂಕ: 1.4.94 ರಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಯಿತು. ಈ ಪ್ರಕರಣಗಳಲ್ಲಿ ಅರ್ಜಿದಾರರ ದಿವಂಗತ ಪತಿಯ ಪ್ರಕರಣವೂ ಸಹ ಒಂದಾಗಿರುತ್ತದೆ.

ಉಲ್ಲೇಖ (7) ರಲ್ಲಿ ಓದಲಾದ ದಿನಾಂಕ: 19.4.95ರ ಸರ್ಕಾರದ ಆದೇಶದಲ್ಲಿ ಗೋವಾ ವಿಮೋಚನಾ ಚಳುವಳಿಗಾರರಿಗೆ ಗೌರವಧನ ಮಂಜುರು ಮಾಡಲು ಹೊರಡಿಸಲಾಗಿದ್ದ ದಿನಾಂಕ: 29.1.91ರ ಸರ್ಕಾರದ ಆದೇಶದಲ್ಲಿ 1969ರ ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವಧನ ಪರಿಯೋಜನೆಗೆ ಮಾಡಿದ್ದ ತಿದ್ದುಪಡಿ ಹಾಗೂ ಅದಕ್ಕೆ ಸಂಬಂಧಿಸಿದ ಎಲ್ಲಾ ಅಧಿಕೃತ ಜ್ಞಾಪನಗಳನ್ನು ಮತ್ತು ಆದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಯಿತು.

ದಿನಾಂಕ: 2.4.94ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 4264 ಪಿಪಿಜಿ 92 ರಿಂದ ಪರಿಣಾಮಕ್ಕೊಳಗಾದವರಲ್ಲಿ ಕೆಲವು ಗೋವಾ ವಿಮೋಚನಾ ಚಳುವಳಿಗಾರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲು ಮಾಡಿದ್ದರು. ಕರ್ನಾಟಕ ಉಚ್ಚ ನ್ಯಾಯಾಲಯ ಉಲ್ಲೇಖ (8) ರಲ್ಲಿ ಓದಲಾದ ದಿನಾಂಕ: 13.7.94 ರಂದು ರಿಟ್ ಅರ್ಜಿ ಸಂಖ್ಯೆ: 15125-223/94 ರಲ್ಲಿ ನೀಡಿದ ತನ್ನ ತೀರ್ಪಿನಲ್ಲಿ ದಿನಾಂಕ: 2.4.94ರ ಸರ್ಕಾರದ ಆದೇಶವನ್ನು ರದ್ದುಗೊಳಿಸಿ, ಅರ್ಜಿದಾರರಿಗೆ ನೋಟೀಸ್‌ನ್ನು ನೀಡಿ ಅವರ ಅಹವಾಲನ್ನು ಕೇಳಿ ಪುನರ್ ಪರಿಗಣಿಸಬೇಕೆಂದು ನಿರ್ದೇಶಿಸಿತ್ತು.

ಉಲ್ಲೇಖ (9) ರಲ್ಲಿ ಓದಲಾದ ದಿನಾಂಕ: 15.01.97ರ ತನ್ನ ತೀರ್ಪಿನಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠವು ಸಹ ಏಕಪೀಠ ತೀರ್ಪನ್ನು ಎತ್ತಿ ಹಿಡಿದು ಯೋಜನೆ ಹಿಂತೆಗೆದುಕೊಂಡ ದಿನಾಂಕದವರೆಗೆ ಅರ್ಜಿದಾರರಿಗೆ ಸೌಲಭ್ಯದಿಂದ ವಂಚಿತರನ್ನಾಗಿ ಮಾಡುವುದು ಸಾಧುವಲ್ಲ ಹಾಗೂ ಅರ್ಜಿದಾರರು ಈ ಯೋಜನೆ ಜಾರಿಯಲ್ಲಿರುವವರೆಗೆ ಪಿಂಚಣಿಗೆ ಅರ್ಹರಾಗಿರುತ್ತಾರೆ ಎಂದು ಆದೇಶಿಸಿತ್ತು.

ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳಿಲ್ಲದಿದ್ದರಿಂದಲೇ ಈ ಯೋಜನೆ ಹಿಂತೆಗೆದು ಕೊಂಡಿದ್ದರಿಂದಲೂ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಕೇವಲ ಶ್ರೀ ಜಿ.ಎಲ್. ರಾಮರೆಡ್ಡಿಯವರು ಪರಿಶೀಲಿಸಿ ನೀಡಿದ ಪ್ರಮಾಣಪತ್ರಗಳ ಆಧಾರದ ಮೇಲೆ ಗೌರವಧನ ಹಣವನ್ನು ಪಾವತಿ ಮಾಡಬೇಕಾಗಿರುವುದರಿಂದ, ಈ 1943 ಪ್ರಕರಣಗಳಲ್ಲಿ ಇರತಕ್ಕಂತಹ ನಕಲಿ ಸಹಿ ಪ್ರಮಾಣಪತ್ರಗಳನ್ನು ಹೊರತುಪಡಿಸಲು ಶ್ರೀ ಜಿ.ಎಲ್. ರಾಮರೆಡ್ಡಿಯವರ ಸಹಾಯ ಕೋರಲಾಗಿತ್ತು. ವಿಳಂಬ ಹಾಗೂ ವ್ಯಾಜ್ಯಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ಹಾಗೂ ಯೋಜನೆಯನ್ನು ಹಿಂತೆಗೆದುಕೊಂಡಿರುವುದರಿಂದ, ಶ್ರೀ ಜಿ.ಎಲ್. ರಾಮರೆಡ್ಡಿಯವರು ತಮ್ಮದೆ ಸಹಿ ಎಂದು ಗುರ್ತಿಸಿದ ಪ್ರಮಾಣಪತ್ರಗಳ ಪ್ರಕತರಣಗಳಲ್ಲಿ ಗೌರವಧನ ಬಾಕಿ ಪಾವತಿ ಮಾಡುವ ಮಟ್ಟಿಗೆ ಮಾತ್ರ ಈ ಆದೇಶವನ್ನು ಹೊರಡಿಸಲು ನಿರ್ಧರಿಸಲಾಗಿದೆ. ಈ ಪ್ರಮಾಣಪತ್ರಗಳು ಅರ್ಜಿದಾರರು ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿ ನೈಜತೆಯ ಬಗ್ಗೆ ಯಾವುದೇ ರೀತಿಯಲ್ಲಿ ದೃಢಪಡಿಸಿರುವುದಿಲ್ಲ ಹಾಗೂ ಸರ್ಕಾರ ಒಪ್ಪಿಕೊಂಡಿರುವುದಿಲ್ಲ.

ಅರ್ಜಿದಾರರ ದಿವಂಗತ ಪತಿಗೆ ರದ್ದುಪಡಿಸಲಾಗಿದ್ದ ಗೋವಾ ಗೌರವಧನವನ್ನು ನ್ಯಾಯಾಲಯದ ಆದೇಶದ ಆಧಾರದ ಮೇಲೆ ಪರಿಶೀಲಿಸಿದ ಸರ್ಕಾರವು ಉಲ್ಲೇಖ (10) ರಲ್ಲಿ ಓದಲಾದ ದಿನಾಂಕ: 29.11.97ರ ಸರ್ಕಾರದ ಆದೇಶದಲ್ಲಿ ದಿನಾಂಕ: 1.4.94 ರಿಂದ 19.4.95 ರವರೆಗಿನ ಬಾಕಿ ಹಣವನ್ನು ಅರ್ಜಿದಾರರ ದಿವಂಗತ ಪತಿಯಾದ ಶ್ರೀ ಗುಂಡಪ್ಪ ಬಿನ್ ಕಾಳಪ್ಪ ನವರಿಗೆ ಮಂಜೂರು ಮಾಡಲಾಗಿತ್ತು.

ಉಲ್ಲೇಖ (11) ರಲ್ಲಿ ಓದಲಾದ ದಿನಾಂಕ: 26.02.2001 ಮತ್ತು 25.8.2003 ರಲ್ಲಿ ಅರ್ಜಿದಾರರು ಮನವಿ ಸಲ್ಲಿಸಿ ಅವರ ಪತಿಯವರಾದ ಶ್ರೀ ಗುಂಡಪ್ಪ ಬಿನ್ ಕಾಳಪ್ಪನವರು ದಿನಾಂಕ: 15.6.97 ರಂದು ಮೃತರಾಗಿರುವುದಾಗಿ ತಿಳಿಸಿ, ಪೂರಕವಾಗಿ ಮರಣ ಸಮರ್ಥನಾ ಪತ್ರವನ್ನು ಸಲ್ಲಿಸಿ, ತಮಗೆ ಗೋವಾ ಗೌರವಧನ ಬಾಕಿ ಹಣ ನೀಡುವಂತೆ ಕೋರಿರುತ್ತಾರೆ. ಪ್ರಕರಣವನ್ನು ಪರಿಶೀಲಿಸಲಾಗಿ ಅರ್ಜಿದಾರರ ಪತಿಯ ದಿನಾಂಕ: 2.4.94 ರಿಂದ 19.4.95ರ ಅವಧಿಯ ಗೋವಾ ಗೌರವಧನ ಬಾಕಿ ಹಣ ಮಂಜೂರಾಗಿರುವ ಪೂರ್ವದಲ್ಲಿಯೇ ಮೃತರಾಗಿರುವುದರಿಂದ ಹಾಗೂ ಅವರಿಗೆ ದಿನಾಂಕ: 29.11.97ರ ಸರ್ಕಾರದ ಆದೇಶದಲ್ಲಿ ಗೋವಾ ಬಾಕಿ ಹಣ ಮಂಜೂರಾಗಿರುವುದರಿಂದ ಆ ಅವಧಿಯ ಹಣವನ್ನು ದಿವಂಗತರ ಪತ್ನಿ ಶ್ರೀಮತಿ ಸಿದ್ದಮ್ಮ ಕೋಂ ಗುಂಡಪ್ಪ ನವರಿಗೆ ನೀಡಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಪಿಪಿಜಿ 2004, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳಿಲ್ಲದ್ದರಿಂದ, ಚಳುವಳಿಯಲ್ಲಿ ಭಾಗವಹಿಸಿದ ಬಗ್ಗೆ ಶ್ರೀ ಜಿ.ಎಲ್. ರಾಮರೆಡ್ಡಿಯವರು ಪರಿಶೀಲಿಸಿ ನೀಡಿರುವ ಪ್ರಮಾಣಪತ್ರಗಳ ಆಧಾರದ ಮೇರೆಗೆ ಗೌರವಧನ ಬಾಕಿ ಹಣವನ್ನು ಪಾವತಿ ಮಾಡುವ ಏಕ ಉದ್ದೇಶದಿಂದ ಈ ಆದೇಶ ಹೊರಡಿಸಲಾಗಿದೆ. ಶ್ರೀ ಜಿ.ಎಲ್. ರಾಮರೆಡ್ಡಿಯವರೇ ನೀಡಿರುವ ಪ್ರಮಾಣ ಪತ್ರಗಳ ಬಗ್ಗೆ ಪರಿಶೀಲಿಸಿ ಬೀದರ್‌ನ ಶ್ರೀ ಗುಂಡಪ್ಪ ಬಿನ್ ಕಾಳಪ್ಪನವರಿಗೆ ಪ್ರಮಾಣಪತ್ರ

ನೀಡಿರುವುದಾಗಿ ದೃಢೀಕರಿಸಿರುವುದರಿಂದ ಹಾಗೂ ಶ್ರೀ ಗುಂಡಪ್ಪ ಬಿನ್ ಕಾಳಪ್ಪ ನವರಿಗೆ ದಿನಾಂಕ: 1.4.94 ರಿಂದ 19.4.95ರ ಅವಧಿಯ ಬಾಕಿ ಹಣ ನೀಡಲು ದಿನಾಂಕ: 29.11.97ರ ಸರ್ಕಾರದ ಆದೇಶದಲ್ಲಿ ಮಂಜೂರಾತಿ ನೀಡಿರುವುದರಿಂದ ದಿವಂಗತರ ಪತ್ನಿ ಶ್ರೀಮತಿ ಸಿದ್ದಮ್ಮ ಕೋಂ ಗುಂಡಪ್ಪ ನವರಿಗೆ ದಿನಾಂಕ: 1.4.94 ರಿಂದ 19.4.95 ರವರೆಗೆ ಗೋವಾ ವಿಮೋಚನಾ ಚಳುವಳಿಯ ಗೌರವಧನ ಬಾಕಿ ಹಣ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರಿಗೆ ಆದೇಶಿಸಿದೆ.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "2235-60-107-01-251" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೃಷ್ಣಮೂರ್ತಿ**

ಪಿ.ಆರ್. 1375

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ ವಿಶ್ರಾಂತಿ ವೇತನ).

## INFRASTRUCTURE DEVELOPMENT SECRETARIAT

**Subject:** Upgradation of Bajpe Airport at Mangalore-Release of Funds-reg.

**Read:**
1) G.O.No. IDD 46 DIA 2004, dated: 31.5.2005.
2) Letter No. LAQ.CR-61/2002-03, dated: 18.8.2005 of the Deputy Commissioner, Dakshina Kannada District, Mangalore.
3) Finance Department's letter No. dated: 2.9.2005.

**PREAMBLE:**

In Government order dated: 31.5.2005 read at Sl.No.1 above an amount of Rs.300.00 lakhs (Three hundred lakhs only) was released towards compensation f9or land acquisition and rehabilitation of affected families in the extension of Second Runway and construction of Terminal building of Bajpe Airport at Mangalore. This amount was released towards the total cost of Rs.1078.659 lakhs required for this purpose.

2) In the letter dated 18.8.2005 read at Sl.No.2 above the Deputy Commissioner, Dakshina Kannada has requested for release of the balance amount of Rs.779 lakhs (Rupees Seven hundred and seventy nine lakhs) only for the purpose of the above mentioned pending works. The various stages of land acquisition to the extent of 158.33 1/2 acres (130.55 1/2 acres private land and 27.78 acres of Government land) required for 2nd stage of extension, New Terminal Complex, Taxi Stand Taxi Way and other developmental works as per request of the Director, Airport Authority of India, Mangalore is as follows:

| ಕ್ರ.ಸಂ. | ಗ್ರಾಮದ ಹೆಸರು | ಭೂಸ್ವಾಧೀನತೆಯ ವಿಸ್ತೀರ್ಣ (ಎಕ್ರೆಗಳಲ್ಲಿ) | ಪ್ರಸ್ತುತ ಹಂತ |
|---|---|---|---|
| 1 | ಮಳವೂರು | 11.43 | ದಿನಾಂಕ: 17.6.2005 ರಂದು ಅವಾರ್ಡು ಘೋಷಣೆಯಾಗಿದ್ದು ವಿಮಾನ ನಿಲ್ದಾಣ ಅಧಿಕಾರಿಯವರಿಗೆ ಜಮೀನು ಹಸ್ತಾಂತರಿಸಲು ಕ್ರಮಕೈಗೊಳ್ಳಲಾಗಿದೆ. |
| 2 | ಮಳವೂರು | 0.23 | ಕಲಂ 6(1)ರ ಅಧಿಸೂಚನೆ ದಿನಾಂಕ: 3.5.2005 ರಂದು ಪ್ರಕಟವಾಗಿರುತ್ತದೆ. ಅವಾರ್ಡು ಮುಕ್ತಾಯ ಹಂತದಲ್ಲಿದೆ. |
| 3 | ಕೊಳಂಬೆ<br>ಅದ್ಯಪಾಡಿ | 0.4<br>61.89.5<br>61.93 1/2 ಎಕ್ರೆ | ಸರ್ಕಾರದ ಆದೇಶ ಸಂಖ್ಯೆ: ಕಂಇ 39 ಭೂಸ್ವಾದ 2005, ದಿನಾಂಕ: 6.8.2005 ರಂತೆ 6(1)ರ ಘೋಷಣೆ ಹೊರಡಿಸಿದೆ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಕಳುಹಿಸಲಾಗಿದೆ. |
| 4 | ಮಳವೂರು<br>ಕೆಂಜಾರು | 41.03.03<br>14.04.00<br>55.07.03 | ಸರ್ಕಾರದ ಆದೇಶ ಸಂಖ್ಯೆ: ಕಂಇ 44 ಭೂಸ್ವಾಧ 2005, ದಿನಾಂಕ: 6.8.2005 ರಂತೆ 6(1)ರ ಘೋಷಣೆ ಹೊರಡಿಸಿದೆ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗಾಗಿ ಸರ್ಕಾರಿ ಮುದ್ರಣಾಲಯಕ್ಕೆ ಕಳುಹಿಸಲಾಗಿದೆ. |
| **ವಿ.ಸೂ:-** ಪುನರ್ ವಸತಿಗಾಗಿ 7.5 ಎಕರೆ ಜಮೀನನ್ನು ಭೂಸ್ವಾಧೀನ ಕಾಯಿದೆ ಕಲಂ 17 ರಡಿಯಲ್ಲಿ ತುರ್ತು ನಿಯಮದಡಿ ವಶಪಡಿಸಿಕೊಳ್ಳಲು ಕಂದಾಯ ಇಲಾಖೆಗೆ ದಿನಾಂಕ: 20.8.2005 ರಂದು ಜಿಲ್ಲಾಧಿಕಾರಿಗಳು ಪ್ರಸ್ತಾವನೆ ಕಳುಹಿಸಿರುತ್ತಾರೆ. | | | |

3) The Finance Department in letter dated: 2.9.2005 read at Sl.No.3 above have issued authorization to incur expenditure of Rs.780 lakhs from the provisions provided in the Supplementary Estimates 2005-06 1st instalment.

4) To facilitate release of funds from the Supplementary Estimates for the above purpose, this order is issued.

**GOVERNMENT ORDER No. IDD 46 DIA 2004, Bangalore, Dated: 30th September 2005**

1) After careful examination of the proposal and for the reasons explained above, Government are pleased to release an amount of Rs.780.00 lakhs (Rupees seven hundred and eighty lakhs only) in the Supplementary Estimates 2005-06" 1st instalment, towards the additional land acquisition and resettlement of the displaced persons for the development of Bajpe Airport, mangalore under the head of Account 5465-01-190-1-05 (Plan) 211 Investment.

2) The necessary authorization to incur expenditure on the provisions provided in the Supplementary Estimates 2005-06 has been issued vide Finance Department's leter No. FD 05 BSG 2005 dated: 2.9.2005.

3) This order is issued with the concurrence of Finance Department vide U.O.Note No. FD 872 Exp.I/2005, dated: 6.9.2005.

4) The Deputy Commissioner, Dakshina Kannada is authorized to draw the amount on a payee's receipt Counter Signed by the Under Secretary to Government, Infrastructure Development Department.

5) He should furnish the utilization certificate for the amount spent in this regard from time to time.

By Order and in the Name of the Governor of Karnataka,

**T.B. RENUKAPRASAD**

P.R. 1376 Under Secretary to Government,

Infrastructure Development Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಸಂಜೀವ ವಿ. ಮರಡ್ಡಿ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಶ್ರೀ ಡಿ.ಸಿ. ನಾಟೀಕಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಶಂಕರ ಮಳಗಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಕೊಪ್ಪಳ ಇವರ ಪತ್ರ ಸಂಖ್ಯೆ: ಕಂದಾಯ:ನೈವಿ:26:2004-05, ದಿನಾಂಕ: 23.7.2004.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 32 ಇಎನ್‌ಕ್ಯೂ 2004, ದಿನಾಂಕ: 27.8.2004.
3) ಸರ್ಕಾರ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 3.3.2005.
4) ಶ್ರೀ ಸಂಜೀವ ವಿ. ಮರಡ್ಡಿ, ಕಾರ್ಯಪಾಲಕ ಇಂಜಿನಿಯರ್, ಶ್ರೀ ಡಿ.ಸಿ. ನಾಟೀಕಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಶಂಕರ ಮಳಗಿ, ಅಂದಿನ ಸಹಾಯಕ ಇಂಜಿನಿಯರ್ ಇವರ ಲಿಖಿತ ಉತ್ತರ ದಿನಾಂಕ: 23.4.2005, 15.4.2005 ಮತ್ತು 21.4.2005.
5) ಆದೇಶ ಸಂಖ್ಯೆ: ಗ್ರಾಅಪ 32 ಇಎನ್‌ಕ್ಯೂ 2004, ದಿನಾಂಕ: 8.6.2005.

**ಪ್ರಸ್ತಾವನೆ:**

ಯಲಬುರ್ಗಾ ತಾಲ್ಲೂಕು, ಗುನ್ನಾಳ ಗ್ರಾಮದಲ್ಲಿ ರಾಯರೆಡ್ಡಿ ನಗರ ಕಾಲೋನಿಯಲ್ಲಿ ಅಕ್ಕಿ ಸಂಗ್ರಹಣೆ ಮತ್ತು ಸಾಗಾಣಿಕೆಯಲ್ಲಿನ ಅವ್ಯವಹಾರ ಕರ್ತವ್ಯ ಲೋಪದ ಬಗ್ಗೆ ಯಲಬುರ್ಗಾ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದ ಶ್ರೀ ಡಿ.ಸಿ. ನಾಟೀಕಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಶಂಖರ ಮಳಗಿ, ಅಂದಿನ ಸಹಾಯಕ ಇಂಜಿನಿಯರ್, ಇವರುಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 23.7.2004ರ ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರದನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 27.8.2004ರ ಆದೇಶದಲ್ಲಿ ಇವರ ಮೇಲಿನ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರುಗಳನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು ಮತ್ತು ಸದರಿ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಸಂಜೀವ ವಿ. ಮರಡ್ಡಿ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ, ಇವರು ಸಹ ಸದರಿ ಆರೋಪಗಳಲ್ಲಿ ಭಾಗಿಯಾಗಿದ್ದಾರೆಂದು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ, ಇವರನ್ನೊಳಗೊಂಡಂತೆ ಕ.ಸ.ಸೇ (ವ.ನಿ.ಅ.) ನಿಯಮ 1957ರ ನಿಯಮ 11 ರನ್ವಯ ಅವರುಗಳಿಗೆ ಇಲಾಖಾ ವಿಚರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಮಾಡಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (4) ರಲ್ಲಿ ಅವರುಗಳು ಲಿಖಿತ ಉತ್ತರಗಳನ್ನು ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದಾರೆ ಹಾಗೂ ಅಮಾನತ್ತನ್ನು ತೆರವುಗೊಳಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸುವಂತೆ ಕೋರಿದ್ದರು.

ಶ್ರೀ ಡಿ.ಸಿ. ನಾಟೀಕಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಶಂಕರ ಮಳಗಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ ಇವರುಗಳ ಅಮಾನತ್ತು ಆದೇಶವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 8.6.2005 ರಲ್ಲಿ ತೆರವುಗೊಳಿಸಿ ಆದೇಶಿಸಲಾಗಿತ್ತು.

ಸದರಿಯವರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಆಪಾದಿತರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬರುವುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶಗಳನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 32 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಂಜೀವ ವಿ. ಮರಡ್ಡಿ, ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ ಶ್ರೀ ಡಿ.ಸಿ. ನಾಟೀಕಾರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಶಂಕರ ಮಳಗಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಯಲಬುರ್ಗಾ ಮೇಲಿನ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 11 ರಲ್ಲಿ ನಿಗದಿಪಡಿಸಲಾದ ವಿಧಿವಿಧಾನಗಳನ್ನು ಅನುಸರಿಸಿ ನಿಯಮ 13 ರನ್ವಯ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ನಿಯಮ 11(2)ರ ರೀತ್ಯ

ಶ್ರೀ ಎಸ್. ಇಂದೂಧರ ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಉಪಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಕೊಪ್ಪಳ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 1377 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಮತ್ತು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿಗೆ ಸೇರಿದ ಒಟ್ಟು 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಲೋ.ಇ: ಸಂಕ (ದ): 2005-06, ದಿನಾಂಕ: 22.9.2005.

2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ರಸ್ತೆಶಾಖೆ: ಎಇ-7: ಚಿಕ್ಕಮಗಳೂರು:ಮೇಲ್ದರ್ಜೆ:05-06, ದಿನಾಂಕ: 22.09.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಮತ್ತು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿಗೆ ಸೇರಿದ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1) ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಸಿ.ಎನ್.ಎಸ್. ರಸ್ತೆಯ 56ನೇ ಕಿ.ಮೀ. ನಿಂದ ಬಿಲ್ಲೇನಹಳ್ಳಿಗೆ ಸೇರುವ ರಸ್ತೆ ಉದ್ದ-1.20 ಕಿ.ಮೀ.

2) ಹೊಳೆನರಸೀಪುರ ತಾಲ್ಲೂಕು ಅಂಕನಹಳ್ಳಿ, ಗಂಗೂರು, ದೊಡ್ಡಬ್ಯಾಗತವಳ್ಳಿ ಮಾರ್ಗ ಸಿ.ಎನ್.ಎಸ್. ರಸ್ತೆಯ 56ನೇ ಕಿ.ಮೀ.ಗೆ ಸೇರುವ ರಸ್ತೆ ಉದ್ದ-5.00 ಕಿ.ಮೀ.

3) ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ವಸ್ತಾರೆ-ಕೊಪ್ಪ ರಸ್ತೆಯಲ್ಲಿ ಆಲ್ದೂರಿನಿಂದ ಹುಕ್ಕುಂದಕ್ಕೆ ಸೇರುವ ರಸ್ತೆ ಉದ್ದ-7.30 ಕಿಮೀ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 168 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಸಿ.ಎನ್.ಎಸ್. ರಸ್ತೆಯ 56ನೇ ಕಿ.ಮೀ. ನಿಂದ ಬಿಲ್ಲೇನಹಳ್ಳಿಗೆ ಸೇರುವ ರಸ್ತೆ ಉದ್ದ-1.20 ಕಿ.ಮೀ.

2) ಹೊಳೆನರಸೀಪುರ ತಾಲ್ಲೂಕು ಅಂಕನಹಳ್ಳಿ, ಗಂಗೂರು, ದೊಡ್ಡಬ್ಯಾಗತವಳ್ಳಿ ಮಾರ್ಗ ಸಿ.ಎನ್.ಎಸ್. ರಸ್ತೆಯ 56ನೇ ಕಿ.ಮೀ.ಗೆ ಸೇರುವ ರಸ್ತೆ ಉದ್ದ-5.00 ಕಿ.ಮೀ.

3) ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ವಸ್ತಾರೆ-ಕೊಪ್ಪ ರಸ್ತೆಯಲ್ಲಿ ಆಲ್ದೂರಿನಿಂದ ಹುಕ್ಕುಂದಕ್ಕೆ ಸೇರುವ ರಸ್ತೆ ಉದ್ದ-7.30 ಕಿಮೀ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1382 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಶಿಕ್ಷಣ ಸಚಿವಾಲಯ

**ಜೋಡಿಕೆ ಆದೇಶ ಸಂಖ್ಯೆ: ಇಡಿ 297 ಯೋಯೋಕ 2005(ಪಿ), ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2005**

ಸರ್ಕಾರಿ ಆದೇಶ ಸಂಖ್ಯೆ: ಇಡಿ 297 ಯೋಯೋಕ 2005, ದಿನಾಂಕ: 17.8.2005 (ಇಡಿ 40 ಸ್ವೀಮರ (ಯೂನಿಕ್) 2005, ದಿನಾಂಕ: 17.8.2005)ರ ಆದೇಶದ ಭಾಗದ 2ನೇ ಕಂಡಿಕೆಯ ನಂತರ ಈ ಕೆಳಕಂಡ ಒಕ್ಕಣೆಯನ್ನು 17.8.2005 ರಿಂದಲೇ ಜಾರಿಗೆ ಬರುವಂತೆ ಓದಿಕೊಳ್ಳತಕ್ಕದ್ದು.

"ಮೇಲ್ಕಂಡ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯೂಮೆಂಟ್‌ನಿಂದ ಹೊರತುಪಡಿಸಿದೆ"

ಉಳಿದಂತೆ ಯಾವ ಬದಲಾವಣೆಯೂ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1385 ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ,

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:-** ನಮ್ಮ ಭೂಮಿ-ನಮ್ಮ ತೋಟ - ಭೂರಹಿತ ಕೃಷಿ ಕಾರ್ಮಿಕರ ಯೋಜನೆ.

**ಪ್ರಸ್ತಾವನೆ:**

ಗ್ರಾಮೀಣ ಪ್ರದೇಶಗಳಲ್ಲಿ ಜೀವನಾಧಾರಕ್ಕೆ ಭೂಮಿಯೇ ಮೂಲ ಸಂಪನ್ಮೂಲ. ಗ್ರಾಮಗಳಲ್ಲಿ ಭೂಮಿಯೇ ಸಾಮಾಜಿಕ ಸ್ಥಾನಮಾನದ ಸಂಕೇತವಾಗಿದೆ. ಭೂರಹಿತ ಕೃಷಿ ಕಾರ್ಮಿಕರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಹಳ ಕನಿಷ್ಠ ಮಟ್ಟದಲ್ಲಿರುತ್ತಾರೆ. ಅಲ್ಲದೆ ಈ ಕೃಷಿ ಕಾರ್ಮಿಕರು ಭೂಮಾಲೀಕರ ಕೃಪೆಯ ಮೇಲೆ ಅವಲಂಬಿತರಾಗಿರುತ್ತಾರೆ. ಇವರ ಅಭಿವೃದ್ಧಿಗಾಗಿ ವಿಶೇಷ ಒತ್ತು ಕೊಡುವುದು ಅವಶ್ಯಕವಾಗಿದೆ. ಆದುದರಿಂದ ರಾಜ್ಯದಲ್ಲಿ ಇರುವ ಭೂರಹಿತ ಕೃಷಿ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ವಿಕಾಸಕ್ಕಾಗಿ ಕರ್ನಾಟಕ ಸರ್ಕಾರ **"ನಮ್ಮ ಭೂಮಿ-ನಮ್ಮ ತೋಟ"** ಎಂಬ ಹೊಸ ಯೋಜನೆಯನ್ನು 2005-06ನೇ ಸಾಲಿನಿಂದ ಜಾರಿಗೆ ತರಲು ತೀರ್ಮಾನಿಸಿದೆ.

**2.0 ಯೋಜನೆಯ ಉದ್ದೇಶ:**

ಭೂರಹಿತ ಕೃಷಿ ಕಾರ್ಮಿಕರಿಗೆ ಕೈತೋಟ ಬೆಳೆಸಲು ಭೂಮಿಯನ್ನು ನೀಡಿ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿರತೆಯನ್ನು ಸುಧಾರಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

**3.0 ಫಲಾನುಭವಿಗಳ ಆಯ್ಕೆ:**

ಸರ್ಕಾರವು ನಿಗದಿಪಡಿಸಿದ ಅರ್ಹತೆಯ ಮಾನದಂಡದ ಪ್ರಕಾರ ವಾರ್ಡ್ ಸಭೆಯ ಶಿಫಾರಸ್ಸುಗಳನ್ನು ಪರಿಗಣಿಸಿ ಫಲಾನುಭವಿಗಳ ಆಯ್ಕೆಯನ್ನು ಗ್ರಾಮಸಭೆಯಲ್ಲಿಯೇ ಮಾಡಲಾಗುವುದು. ಮುಖ್ಯವಾದ ಮಾನದಂಡಗಳು ಕೆಳಗಿನಂತಿವೆ:

(ಅ) ಕುಟುಂಬಗಳು ಕನಿಷ್ಠ ಪಕ್ಷ ಎರಡು ತಲೆಮಾರು ಯಾವುದೇ ಕೃಷಿ ಭೂಮಿಯನ್ನು ಹೊಂದಿರಬಾರದು.

(ಆ) ಜೀವನಕ್ಕಾಗಿ ಕೃಷಿ ಕೆಲಸದ ಮೇಲೆ ಅವಲಂಬಿತರಾಗಿರಬೇಕು.

**4.0 ಭೂಮಿಯ ಪ್ರಮಾಣ ಮತ್ತು ಲಕ್ಷಣ:**

ಒಂದು ಕುಟುಂಬಕ್ಕೆ ರೂ. 6000/- ದಲ್ಲಿ ಖರೀದಿಸಬಹುದಾದ ಸುಮಾರು 5 ಗುಂಟೆ ಖುಷ್ಕಿ ಜಮೀನು ಅಥವಾ 2.5 ಗುಂಟೆ ನೀರಾವರಿ ಜಮೀನನ್ನು ನೀಡಲು ಪ್ರಸ್ತಾಪಿಸಿದೆ. ಜಮೀನು ರಸ್ತೆ ಬದಿಗೆ ಅಥವಾ ಗ್ರಾಮಕ್ಕೆ ಹತ್ತಿರವಾಗಿರಬೇಕು ಮತ್ತು ಫಲವತ್ತಾಗಿರಬೇಕು. ಈ ಕಾರ್ಯಕ್ರಮದಡಿ, ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡ ಅಥವಾ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸೇರಿರುವ ಭೂಮಿಯನ್ನು ಖರೀದಿಸಲಾಗುವುದಿಲ್ಲ.

**5.0 ಭೂಮಿ ಖರೀದಿ ಮತ್ತು ಹಂಚಿಕೆ:**

ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಶಿಫಾರಸ್ಸುಗಳ ಮೇರೆಗೆ ಗ್ರಾಮ ಪಂಚಾಯತಿಯು ಜಮೀನನ್ನು ಗುರುತಿಸಿ, ಅಗತ್ಯವಿರುವ ಪ್ರಮಾಣದ ಭೂಮಿಯನ್ನು ಖರೀದಿಸುತ್ತದೆ. ಕಾರ್ಯಕ್ರಮದ ಅನುಷ್ಠಾನ, ಭೂಮಿ ಗುರುತಿಸುವಿಕೆ ಮತ್ತು ಖರೀದಿಗಾಗಿ, ಕನಿಷ್ಠ ಪಕ್ಷ ಮೂರು ಫಲಾನುಭವಿಗಳನ್ನು ಆಯ್ಕೆ ಮಾಡಲು ಸಮಿತಿಯು ನಾಮಕರಣ ಮಾಡುವುದು. ಗುರುತಿಸಿದ ಭೂಮಿಯ ಫಲವತ್ತತೆ, ಇರುವ ಸ್ಥಳ, ಮಾರುಕಟ್ಟೆ ಬೆಲೆ ಆಧರಿಸಿ, ಭೂಮಿಯ ಖರೀದಿ ದರವನ್ನು ತಹಸೀಲ್ದಾರ್‌ರವರು ನಿಗದಿಪಡಿಸುವರು. ಜಮೀನನ್ನು 20 ವರ್ಷಗಳ ಕಾಲ ಭೂಪರಿವರ್ತನೆ ಅಥವಾ ಹಸ್ತಾಂತರಿಸದಂತೆ ಷರತ್ತು ವಿಧಿಸಿ ಅರ್ಹ ಕುಟುಂಬಕ್ಕೆ ಗ್ರಾಮ ಪಂಚಾಯತಿಯು ಜಮೀನು ನೀಡುವುದು. ಪತಿ ಮತ್ತು ಪತ್ನಿಯವರ ಹೆಸರಿನಲ್ಲಿ ಜಂಟಿ ಪಟ್ಟಾವನ್ನು ನೀಡಲಾಗುವುದು. ಸ್ವಸಹಾಯ ಗುಂಪಿನ ಅರ್ಹ ಸದಸ್ಯರ ಜಂಟಿ ಹೆಸರುಗಳಲ್ಲಿ ಪಟ್ಟಾವನ್ನು ನೀಡಬೇಕಾಗಿರುತ್ತದೆ. ಈ ಉದ್ದೇಶಕ್ಕಾಗಿ ಹೊಸ ಸ್ವಸಹಾಯ ಗುಂಪುಗಳನ್ನು ಸಹ ರಚಿಸಬಹುದಾಗಿರುತ್ತದೆ. ಆದಷ್ಟು ಮಟ್ಟಿಗೆ ಸಮಾನ ವಿಸ್ತೀರ್ಣದ ಪ್ಲಾಟುಗಳನ್ನು ಜಮೀನಿನ ಮೇಲೆ ಗುರುತಿಸಿ, ಹಂಚಿಕೆಯನ್ನು ಆದಷ್ಟು ಮಟ್ಟಿಗೆ ಚೀಟಿ ಎತ್ತುವ ಮೂಲಕ ಮಾಡಬಹುದಾಗಿರುತ್ತದೆ.

**6.0 ಭೂಮಿಯ ಅಭಿವೃದ್ಧಿ:**

ಈ ಕೆಳಕಂಡ ಸರ್ಕಾರದ ಇಲಾಖೆಗಳು ಈ ಕಾರ್ಯಕ್ರಮದಡಿ ಫಲಾನುಭವಿಗಳಿಗೆ ನೀಡಿದ ಜಮೀನಿನ ಅಭಿವೃದ್ಧಿಗೆ ಸರ್ವ ಪ್ರಯತ್ನ ಮಾಡಬೇಕು.

i) ಜಲಾನಯನ ಅಭಿವೃದ್ಧಿ ಇಲಾಖೆ
ii) ತೋಟಗಾರಿಕೆ ಇಲಾಖೆ
iii) ಕೃಷಿ ಇಲಾಖೆ
iv) ರೇಷ್ಮೆ ಇಲಾಖೆ
v) ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
vi) ಸಮಾಜಕಲ್ಯಾಣ/ ಹಿಂದುಳಿದ ಜನಾಂಗಗಳ/ ಅಲ್ಪಸಂಖ್ಯಾತ ಇಲಾಖೆ
vii) ಸಾಮಾಜಿಕ ಅರಣ್ಯ ಇಲಾಖೆ
viii) ವಸತಿ ಇಲಾಖೆ
ix) ಗ್ರಾಮೀಣಾಭಿವೃದ್ಧಿ ಇಲಾಖೆ

ಆದಷ್ಟು ಮಟ್ಟಿಗೆ ವಿವಿಧ ಇಲಾಖೆಗಳ ಕಾರ್ಯಕ್ರಮಗಳ ಸೌಲಭ್ಯಗಳನ್ನು ಈ ಯೋಜನೆಯಡಿ ಭೂಮಿ ಪಡೆದ ಫಲಾನುಭವಿಗಳಿಗೆ ನೀಡಲು ಪ್ರಯತ್ನಿಸಲಾಗುವುದು. ಈ ಯೋಜನೆಯ ಉದ್ದೇಶವನ್ನು ಸಾರ್ಥಕಗೊಳಿಸಲು ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರಿಗಳು ಮತ್ತು ಗ್ರಾಮ ಪಂಚಾಯತಿಯು ಸಮನ್ವಯದಿಂದ ಕೆಲಸ ಮಾಡುವುದು.

**7.0 ಖರ್ಚಿನ ಅಂದಾಜು:**

ನೀರಾವರಿ ಜಮೀನಿಗೆ ಒಂದುಎಕರೆಗೆ ಸರಾಸರಿ ರೂ.1,00,000-00 ಮತ್ತು ಖುಷ್ಕಿ ಜಮೀನಿಗೆ ಒಂದು ಎಕರೆಗೆ ಸರಾಸರಿ ರೂ.50,000-00 ಗಳನ್ನು ಅಂದಾಜಿಸಲಾಗಿದೆ. ಬೇಕಾದ ಒಟ್ಟು ಜಮೀನಿನ ಹಂಚಿಕೆಯಲ್ಲಿ, ಶೇಕಡಾ 80ರಷ್ಟು ಖುಷ್ಕಿ ಮತ್ತು ಶೇಕಡಾ 20 ರಷ್ಟು ನೀರಾವರಿ ಭೂಮಿಯಾಗಿರಬಹುದು. ಈ ಕಾರ್ಯಕ್ರಮದಡಿ 2005-06ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ.20.00 ಕೋಟಿ ಅನುದಾನದಿಂದ 32,000 ಕೃಷಿ ಕಾರ್ಮಿಕರ ಕುಟುಂಬಗಳನ್ನು ಯೋಜನೆಯಡಿ ತರಬಹುದು.

**8.0. ಗ್ರಾಮ ಪಂಚಾಯತಿಗಳ ಆಯ್ಕೆ:**

ಮೊದಲ ವರ್ಷ ಈ ಯೋಜನೆಯಡಿ ಪ್ರತಿ ತಾಲ್ಲೂಕಿನಲ್ಲಿ ಎರಡರಿಂದ ಮೂರು ಗ್ರಾಮ ಪಂಚಾಯತ್‌ಗಳನ್ನು ಆಯ್ಕೆ ಮಾಡಲಾಗುವುದು. ಸರ್ವ ಕುಟುಂಬ ಸಮೀಕ್ಷೆ/ಜನಗಣತಿಯ ಪ್ರಕಾರ, ಭೂ ರಹಿತ ಕೃಷಿ ಕಾರ್ಮಿಕರು ಹೆಚ್ಚಾಗಿರುವ ಗ್ರಾಮ

ಪಂಚಾಯತಿ ಗಳನ್ನು ಆಯ್ಕೆ ಮಾಡುವುದು. ಆಯ್ದ ಗ್ರಾಮ ಪಂಚಾಯತ್‌ಗಳು ಸಮಗ್ರ ಅಭಿವೃದ್ಧಿಗಾಗಿ, ಎಲ್ಲಾ ಕುಟುಂಬಗಳನ್ನು ಆಯ್ಕೆ ಮಾಡುವುದು. ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಗ್ರಾಮಸಭೆಯಲ್ಲಿಟ್ಟು ಅಂತಿಮ ಅನುಮೋದನೆ ಪಡೆಯಬೇಕು. ಜಿಲ್ಲಾ ಪಂಚಾಯತ್‌ಗಳು, ಸಲ್ಲಿಸಿರುವ ಅಂದಾಜು ಪಟ್ಟಿಯ ಆಧಾರದ ಮೇಲೆ ಅನುದಾನವನ್ನು ಹಂಚಿಕೆ ಮಾಡಲಾಗುವುದು. ಭೂಮಿಯ ದರ ಹಾಗೂ ಅರ್ಹ ಕುಟುಂಬಗಳ ಸಂಖ್ಯೆಗಳ ಆಧಾರದ ಮೇರೆಗೆ ಜಿಲ್ಲಾ ಪಂಚಾಯತ್‌ಗಳು ಅನುದಾನವನ್ನು ಗ್ರಾಮ ಪಂಚಾಯತ್ ಗಳಿಗೆ ಬಿಡುಗಡೆ ಮಾಡುವುದು.

**9.0. ಮಾರ್ಗಸೂಚಿಗಳು:**

ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ, ಅವಶ್ಯವಿರುವ ವಿವರವಾದ ಮಾರ್ಗಸೂಚಿಗಳನ್ನು ಆದೇಶದ ಅನುಬಂಧದಲ್ಲಿ ಲಗತ್ತಿಸಿದೆ. ಈ ಯೋಜನೆಯ ನಿರೂಪಣೆ, ಅನುಷ್ಠಾನ, ಉಸ್ತುವಾರಿ ಮತ್ತು ಮೌಲ್ಯಮಾಪನಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು, ಈ ಮಾರ್ಗಸೂಚಿಗಳು ಗ್ರಾಮ ಪಂಚಾಯತ್ ಗಳಿಗೆ ಮತ್ತು ಇತರೆ ಅಧಿಕಾರಿಗಳಿಗೆ ಸಹಕಾರಿಯಾಗಿರುತ್ತವೆ.

**10.0** ರಾಜ್ಯದಲ್ಲಿ 2005-06ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಿದ ರೂ.20.00 ಕೋಟಿಯ "ನಮ್ಮ ಭೂಮಿ-ನಮ್ಮ ತೋಟ" ಯೋಜನೆಯನ್ನು ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸಲು ಸಚಿವ ಸಂಪುಟವು ದಿನಾಂಕ 15-09-2005 ರಂದು ಅನುಮೋದನೆಯನ್ನು ನೀಡಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 5 ಸ್ವಉಕಾ 2005, ಬೆಂಗಳೂರು, ದಿನಾಂಕ: 28-09-2005**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು, ರಾಜ್ಯದಲ್ಲಿ 2005-06ನೇ ಸಾಲಿನಿಂದ "ನಮ್ಮ ಭೂಮಿ-ನಮ್ಮ ತೋಟ" ಎಂಬ ಹೊಸ ಯೋಜನೆಯನ್ನು ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸಲು ಅನುಮೋದನೆ ನೀಡಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 1386

ನಿರ್ದೇಶಕರು (ಸ್ವ ಉದ್ಯೋಗ ಕಾರ್ಯಕ್ರಮಗಳು)

ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 'ಸುವರ್ಣ ಕರ್ನಾಟಕ ಜಯಂತಿ' ಉತ್ಸವದ ಆಚರಣೆಯ ಅಂಗವಾಗಿ ವಿಶ್ವಕನ್ನಡ ಸಮ್ಮೇಳನ ನಡೆಸುವ ಕುರಿತು.

**ಪ್ರಸ್ತಾವನೆ:**

ಕರ್ನಾಟಕವು ಏಕೀಕರಣಗೊಂಡು 1ನೇ ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿದ್ದು ಈ 50 ವರ್ಷಗಳಲ್ಲಿ ಮಾಡಿರುವ ಸಾಧನೆಗಳನ್ನು ನಾಡಿನ ಜನತೆಗೆ ತಿಳಿಸಿಕೊಡಲು ಹಾಗೂ ಮುಂದಿನ ಅಭಿವೃದ್ಧಿಗಳ ಬಗ್ಗೆ ಅವರ ಗಮನ ಸೆಳೆಯಲು ಈ ಸಂದರ್ಭದ ಅವಕಾಶವನ್ನು ಉಪಯೋಗಿಸಿಕೊಂಡು ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವವನ್ನು 'ಸುವರ್ಣ ಕರ್ನಾಟಕ' ಎಂಬ ಹೆಸರಿನಲ್ಲಿ ಅರ್ಥಪೂರ್ಣವಾಗಿ ಆಚರಿಸಲು ಸರ್ಕಾರವು ತೀರ್ಮಾನಿಸಿದೆ. ಈ ಸುವರ್ಣ ಜಯಂತಿಯನ್ನು 1ನೇ ನವೆಂಬರ್ 2006 ರಿಂದ 2007ರ ನವೆಂಬರ್ ರವರೆಗೆ ಒಂದು ವರ್ಷಗಳ ಕಾಲ ಆಚರಿಸಲು ಉದ್ದೇಶಿಸಲಾಗಿದೆ. ಸುವರ್ಣ ಕರ್ನಾಟಕ ಆಚರಣೆಯ ಅಂಗವಾಗಿ ಹಮ್ಮಿಕೊಂಡ ಪ್ರಮುಖ ಕಾರ್ಯಕ್ರಮಗಳಲ್ಲಿ ವಿಶ್ವಕನ್ನಡ ಸಮ್ಮೇಳನವು ಒಂದು ಅವಿಸ್ಮರಣೀಯ ಕಾರ್ಯಕ್ರಮವಾಗಿರುತ್ತದೆ. ಕರ್ನಾಟಕದ ಈ ನಾಡ ಹಬ್ಬವನ್ನು 2006ರ ನವೆಂಬರ್ ಮಾಹೆಯಲ್ಲಿ ಬೆಂಗಳೂರಿನಲ್ಲಿ ಸೂಕ್ತವೆನಿಸಬಹುದಾದ 3 ದಿನಗಳ ಅವಧಿಯಲ್ಲಿ ಏರ್ಪಡಿಸಲು ತೀರ್ಮಾನಿಸಲಾಗಿದೆ.

ಈ ಪ್ರಸ್ತಾಪಿತ ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಕನ್ನಡ-ಕನ್ನಡಿಗ, ಕರ್ನಾಟಕದ ಸಾಂಸ್ಕೃತಿಕ, ಭೌತಿಕ ಶ್ರೀಮಂತಿಕೆಯನ್ನು, ಸ್ಥಿತಿಗತಿಯನ್ನು ಗುರುತಿಸುವಂತಹ ವಸ್ತುಪ್ರದರ್ಶನ, ಕಲಾಪ್ರದರ್ಶನ, ವಿಚಾರ ಸಂಕೀರಣ, ಸಾಹಿತ್ಯ ಸಂವಾದ, ಕಮ್ಮಟ, ಶಿಬಿರ, ಕವಿಗೋಷ್ಠಿ, ಒಂದುನೂರು ಕನ್ನಡದ ಶ್ರೇಷ್ಠಗ್ರಂಥಗಳ ಪ್ರಕಟಣೆ, ಸರ್ಕಾರಿ ವಲಯ ಹಾಗೂ ಖಾಸಗಿ ಪುಸ್ತಕ ಪ್ರಕಾಶಕರಿಂದ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟ, ಗ್ರಾಮೀಣ ಜಾನಪದ ಕ್ರೀಡೋತ್ಸವ, ಚಲನಚಿತ್ರೋತ್ಸವ ಮುಂತಾದ ಕಾಯಕ್ರಮಗಳನ್ನು ಆಯೋಜಿಸಲು ಪ್ರಸ್ತಾಪಿಸಿದೆ.

ವಿಶ್ವಕನ್ನಡ ಸಮ್ಮೇಳನದ ಸಂಕ್ಷಿಪ್ತ ವಿವರಗಳನ್ನು ಹಾಗೂ ಅದಕ್ಕೆ ತಗಲುವ ಅಂದಾಜು ವೆಚ್ಚದ ವಿವರಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕರಅ 2005(1), ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 'ಸುವರ್ಣ ಕರ್ನಾಟಕ ಜಯಂತಿ' ಆಚರಣೆಯ ಅಂಗವಾಗಿ "ವಿಶ್ವಕನ್ನಡ ಸಮ್ಮೇಳನ" ವನ್ನು 2006ರ ನವೆಂಬರ್ ಮಾಹೆಯಲ್ಲಿ ಸೂಕ್ತವೆನಿಸಬಹುದಾದ 3 ದಿನಗಳ ಅವಧಿಯಲ್ಲಿ ಬೆಂಗಳೂರಿನಲ್ಲಿ ರೂ.525.00 ಲಕ್ಷ (ಐನೂರು ಇಪ್ಪತ್ತೈದು ಲಕ್ಷಗಳು ಮಾತ್ರ) ಗಳ ವೆಚ್ಚದಲ್ಲಿ ಆಚರಿಸಲು ಅನುಮೋದನೆ ನೀಡಲಾಗಿದೆ. ವೆಚ್ಚದ ವಿವರಗಳನ್ನು ಅನುಬಂಧದಲ್ಲಿ ತೋರಿಸಲಾಗಿದೆ.

ಸರ್ಕಾರದ ವತಿಯಿಂದ ರೂಪಿಸಿದ ಕಾರ್ಯಕ್ರಮಗಳ ಜೊತೆಗೆ ಇತರೆಯವರ ಅಂದರೆ ಸಾರ್ವಜನಿಕ ಸಂಸ್ಥೆಗಳ / ಖಾಸಗಿ ಸಹಭಾಗಿತ್ವ ಪಡೆದು ಮಾಡತಕ್ಕದ್ದು. ಇದರಿಂದಾಗಿ ಭಾಗವಹಿಸುವವರನ್ನು ಕಾರ್ಯಕ್ರಮದಲ್ಲಿ ತೊಡಗಿಸಿಕೊಂಡಂತೆ ಆಗುವುದಲ್ಲದೆ ಸಮ್ಮೇಳನಕ್ಕೆ ತಗಲುವ ವೆಚ್ಚವನ್ನು ಅನುಕೂಲಕರವಾಗಿ ನಿಭಾಯಿಸಬಹುದಾಗಿದೆ.

ವಿಶ್ವಕನ್ನಡ ಸಮ್ಮೇಳನಕ್ಕೆ ತಗಲುವ ವೆಚ್ಚವನ್ನು 'ಸುವರ್ಣ ಕರ್ನಾಟಕ ಜಯಂತಿ' ಆಚರಣೆಗೆ ಆಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ (ಲೆಕ್ಕಶೀರ್ಷಿಕೆ 2205-00-102-4-09-05ರ (ಯೋಜನೆ) ಭರಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:1352 ವೆಚ್ಚ:5:2005, ದಿನಾಂಕ: 3.8.2005 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾ ಗಣೇಶ್**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 27 ಕರಅ 2005, ದಿನಾಂಕ: 26.9.2005ಕ್ಕೆ ಅನುಬಂಧ**

(ರೂ. ಲಕ್ಷಗಳು)

| ಕ್ರ.ಸಂ. | ವಿವರಗಳು | 2005-06 | 2006-07 | 2007-08 | ಒಟ್ಟಾರೆ |
|---|---|---|---|---|---|
| 1 | 2 | 3 | 4 | 5 | 6 |
| 1 | ಶ್ರೇಷ್ಠ ಗ್ರಂಥಗಳ ಪ್ರಕಟಣೆ | 20.00 | 30.00 | - | 50.00 |
| 2 | ಸಾಕ್ಷ್ಯಚಿತ್ರ ನಿರ್ಮಾಣ | 20.00 | 10.00 | | 30.00 |
| 3 | ವೇದಿಕೆ ನಿರ್ಮಾಣ | - | 30.00 | | 30.00 |
| 4 | ಪ್ರಚಾರ ಸಂಘಟನೆ | 03.00 | 15.00 | 07.00 | 25.00 |
| 5 | ವಸತಿ / ಊಟ | - | 40.00 | - | 40.00 |
| 6 | ಲಾಂಛನ / ಸಭಾ / ಪ್ರಯಾಣ ವೆಚ್ಚ | 03.00 | 07.00 | - | 10.00 |
| 7 | ಜಿಲ್ಲಾ ತಾಲ್ಲೂಕು-ಕಾರ್ಯಕ್ರಮ | - | 40.00 | 40.00 | 80.00 |
| 8 | ರಾಜಧಾನಿಯಲ್ಲಿ ಕ್ರೀಡೋತ್ಸವ | - | 10.00 | 05.00 | 15.00 |
| 9 | ಚಲನಚಿತ್ರೋತ್ಸವ | - | 07.00 | 03.00 | 10.00 |
| 10 | 1) ತಾತ್ಕಾಲಿಕ ಸಿಬ್ಬಂದಿ ವಿಶೇಷ ಘಟಕ ವೆಚ್ಚ | 09.00 | 16.00 | 15.00 | 40.00 |
| | 2) ಸ್ಥಳೀಯ ಸಾರಿಗೆ ಮತ್ತಿತರೆ | 05.00 | 10.00 | 05.00 | 20.00 |
| | 3) ಲೇಖನ ಸಾಮಗ್ರಿ ಅಂಚೆ ವೆಚ್ಚ, ದೂರವಾಣಿ | 10.00 | 10.00 | 05.00 | 25.00 |
| 11 | ವಿಚಾರ / ಕವಿಗೋಷ್ಠಿ | - | 20.00 | 05.00 | 25.00 |
| 12 | ವಸ್ತು / ಪುಸ್ತಕ ಪ್ರದರ್ಶನ | - | 30.00 | 10.00 | 40.00 |
| 13 | ಉದ್ಘಾಟನೆ / ಮೆರವಣಿಗೆ | - | 40.00 | - | 40.00 |
| 14 | ಇ - ಪ್ರಗತಿ ರೂಪಕ | 20.00 | - | - | 20.00 |
| 15 | ಏಕೀಕರಣ ಆಂದೋಲನ ಸ್ಮಾರಕಗಳ ಕುರಿತು ತೈಲ ಚಿತ್ರಗಳ ನಿರ್ಮಾಣ ಹಾಗೂ ಪ್ರದರ್ಶನ | - | 25.00 | - | 25.00 |
| | **ಒಟ್ಟು ಮೊತ್ತ** | **90.00** | **340.00** | **95.00** | **525.00** |

**ರೇವಣ್ಣ ಗೌಡ**

ಪಿ.ಆರ್. 1387 ವಿಶೇಷಾಧಿಕಾರಿ, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಸುವರ್ಣ ಕರ್ನಾಟಕ ಕಾರ್ಯಕ್ರಮದ ಅನುಷ್ಠಾನ ಮತ್ತು ವಿಶ್ವಕನ್ನಡ ಸಮ್ಮೇಳನಕ್ಕೆ ಪ್ರತ್ಯೇಕ ತಾತ್ಕಾಲಿಕ 'ವಿಶೇಷ ಘಟಕ' ಸೃಜಿಸುವ ಕುರಿತು.

**ಓದಲಾಗಿದೆ:** 1) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕರ ಪತ್ರ ಕಸನಿ/ಸಿಬ್ಬಂದಿ-1/2005-06, ದಿನಾಂಕ: 30.6.2005 ಮತ್ತು ದಿನಾಂಕ: 18.7.2005.

2) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕರಅ 2005, ದಿನಾಂಕ: 26.9.2005.

**ಪ್ರಸ್ತಾವನೆ:**

ಕರ್ನಾಟಕವು ಏಕೀಕರಣಗೊಂಡು 1ನೇ ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿದ್ದು ಈ 50 ವರ್ಷಗಳಲ್ಲಿ ಮಾಡಿರುವ ಸಾಧನೆಗಳನ್ನು ನಾಡಿನ ಜನತೆಗೆ ತಿಳಿಸಿಕೊಡಲು ಹಾಗೂ ಮುಂದಿನ ಅಭಿವೃದ್ಧಿಗಳ ಬಗ್ಗೆ ಅವರ ಗಮನ ಸೆಳೆಯಲು ಈ ಸಂದರ್ಭದ ಅವಕಾಶವನ್ನು ಉಪಯೋಗಿಸಿಕೊಂಡು ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವವನ್ನು 'ಸುವರ್ಣ ಕರ್ನಾಟಕ' ಎಂಬ ಹೆಸರಿನಲ್ಲಿ ಅರ್ಥಪೂರ್ಣವಾಗಿ ಆಚರಿಸಲು ಸರ್ಕಾರವು ತೀರ್ಮಾನಿಸಿದೆ.

ಸುವರ್ಣ ಕರ್ನಾಟಕ ಆಚರಣೆಯ ಅಂಗವಾಗಿ ಹಮ್ಮಿಕೊಂಡ ಪ್ರಮುಖ ಕಾರ್ಯಕ್ರಮಗಳಲ್ಲಿ ವಿಶ್ವಕನ್ನಡ ಸಮ್ಮೇಳನವು ಒಂದು ಅವಿಸ್ಮರಣೀಯ ಕಾರ್ಯಕ್ರಮವಾಗಿರುತ್ತದೆ.

ಕರ್ನಾಟಕದ ಈ ನಾಡ ಹಬ್ಬವನ್ನು 2006ರ ನವೆಂಬರ್ ಮಾಹೆಯಲ್ಲಿ ಬೆಂಗಳೂರಿನಲ್ಲಿ ಸೂಕ್ತವೆನಿಸಬಹುದಾದ 3 ದಿನಗಳ ಅವಧಿಯಲ್ಲಿ ಏರ್ಪಡಿಸಲು ತೀರ್ಮಾನಿಸಲಾಗಿದೆ.

ಈ ಎರಡು ಕಾರ್ಯಕ್ರಮಗಳು ಬೃಹತ್ ಪ್ರಮಾಣದಲ್ಲಿ ನಡೆಯಲಿರುವುದರಿಂದ ಈ ಕಾರ್ಯಕ್ರಮಗಳ ರೂಪರೇಶೆಗಳನ್ನು ವೈಶಿಷ್ಠಮಯವಾಗಿ ತಯಾರಿಸಿ ಅನುಷ್ಠಾನಗೊಳಿಸುವ ಕಾರ್ಯಕ್ಕಾಗಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ ಪ್ರತ್ಯೇಕ ಸಿಬ್ಬಂದಿಯ ಘಟಕದ ರಚನೆಯ ಅಗತ್ಯವಿದೆ ಎಂದು ತಿಳಿಸಿ ಈ ಘಟಕದ ಸಿಬ್ಬಂದಿಯ ವಿವರಗಳೊಂದಿಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು ಮೇಲೆ ಕ್ರಮ ಸಂಖ್ಯೆಯ (1) ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಕಳುಹಿಸಿ ಸರ್ಕಾರದ ಆದೇಶ ಕೋರಿದ್ದಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸುವರ್ಣ ಕರ್ನಾಟಕ ಸ್ವರ್ಣಜಯಂತಿಯ ಅಂಗವಾಗಿ ವಿಶ್ವಕನ್ನಡ ಸಮ್ಮೇಳನವನ್ನು 2006 ನವೆಂಬರ್ ತಿಂಗಳಿನಲ್ಲಿ ರೂ.525/- ಲಕ್ಷಗಳ ವೆಚ್ಚದಲ್ಲಿ ನಡೆಸಲು ಸರ್ಕಾರ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕರಅ 2005, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಸ್ವರ್ಣ ಜಯಂತಿಯ ಅಂಗವಾಗಿ ಹಮ್ಮಿಕೊಂಡ ಕಾರ್ಯಕ್ರಮಗಳ ಅನುಷ್ಠಾನ ಹಾಗೂ ಈ ಸಂದರ್ಭದಲ್ಲಿ ಏರ್ಪಡಿಸುವ ವಿಶ್ವಕನ್ನಡ ಸಮ್ಮೇಳನವನ್ನು ಯಶಸ್ವಿಯಾಗಿ ಆಯೋಜಿಸಲು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ ಹುದ್ದೆಗಳನ್ನು ಒಳಗೊಂಡ ಒಂದು ವಿಶೇಷ ಸಿಬ್ಬಂದಿ ಘಟಕವನ್ನು ಒಂದು ವರ್ಷದ ಅವಧಿಗೆ ರಚಿಸಲು ಮಂಜೂರಾತಿ ನೀಡಿದೆ.

ಈ ವಿಶೇಷ ಘಟಕದ ಸಿಬ್ಬಂದಿಯನ್ನು ಪ್ರತಿ ನಿಯೋಜನೆ ಮೇಲೆ / ಖಾಸಗೀ ಏಜೆನ್ಸಿಗಳ ಮೂಲಕ ನಿಯಮಾನುಸಾರ ತುಂಬತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 'ಸುವರ್ಣ ಕರ್ನಾಟಕ ಸ್ವರ್ಣ ಜಯಂತಿಯ' ಅಂಗವಾಗಿ 2006ರ ನವೆಂಬರ್ ಮಾಹೆಯಲ್ಲಿ ನಡೆಯುವ ವಿಶ್ವಕನ್ನಡ ಸಮ್ಮೇಳನಕ್ಕೆ ಮಂಜೂರಾದ ರೂ.525.00 ಲಕ್ಷಗಳ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:1352 ವೆಚ್ಚ:5:2005, ದಿನಾಂಕ: 3.8.2005 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ಸುಮಿತ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪ್ರ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 27 ಕರಅ 2005, ದಿನಾಂಕ: 26.9.2005ಕ್ಕೆ ಅನುಬಂಧ**

| ಅಧಿಕಾರಿ / ನೌಕರರು | | | |
|---|---|---|---|
| 1. ಜಂಟಿ ನಿರ್ದೇಶಕರು-1 | 9580 | - | 14,200 |
| 2. ವ್ಯವಸ್ಥಾಪಕರು (ಮ್ಯಾನೇಜರ್)-1 | 6000 | - | 11,200 |
| 3. ಕಾರ್ಯಕ್ರಮ ಅಧಿಕಾರಿ-1 | 6000 | - | 11,200 |
| 4. ಲೆಕ್ಕ ಅಧೀಕ್ಷಕರು-1 | 5200 | - | 9,580 |
| 5. ಅಧೀಕ್ಷಕರು-1 | 5200 | - | 9,580 |
| 6. ಶೀಘ್ರಲಿಪಿಗಾರರು ಕಂಪ್ಯೂಟರ್ ಆಪರೇಟರ್-3 | 3850 | - | 7,050 |
| 7. ಪ್ರಥಮ ದರ್ಜೆ ಸಹಾಯಕ-3 | 3850 | - | 7,050 |
| 8. ಲೆಕ್ಕಿಗ-1 | 3850 | - | 7,050 |
| 9. ದ್ವಿತೀಯ ದರ್ಜೆ ಸಹಾಯಕ-2 | 3000 | - | 5,450 |
| 10. ಗ್ರೂಪ್ 'ಡಿ' -1 | 2,500 | - | 3,850 |

**ಎ.ಪಿ. ಸುಮಿತ್ರಮ್ಮ**

ಪಿ.ಆರ್. 1388 ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪ್ರ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕನ್ನಡ ಭವನ ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 104 ಕರಅ 2004, ದಿನಾಂಕ: 22.8.2005.

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ:11:ಕಭ:2003-04, ದಿ: 25.8.2005.

**ಪ್ರಸ್ತಾವನೆ:**

ಮೇಲ್ಕಂಡ ಓದಲಾದ (1)ರ ಸರ್ಕಾರಿ ಆದೇಶದಲ್ಲಿ 2005-06ನೇ ಸಾಲಿನಲ್ಲಿ ಕ್ರಿಯಾ ಯೋಜನೆ ಪ್ರಕಾರ ಕನ್ನಡ ಭವನ, ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಅವಕಾಶ ಮಾಡಿಕೊಂಡ 35.00 ಲಕ್ಷ ರೂ.ಗಳಲ್ಲಿ ಈಗಾಗಲೇ ರೂ.11.50 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ.

ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರು ಕಟ್ಟಡದ ಬಹುತೇಕ ಕಾಮಗಾರಿಯು ಪೂರ್ಣಗೊಂಡಿದ್ದು ಕ್ರಿಯಾ ಯೋಜನೆಯಲ್ಲಿ ಉಳಿದ ರೂ.23.50 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 104 ಕರಅ 2004, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಂಗಳೂರಿನ ಕನ್ನಡ ಭವನ ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ.35.00 ಲಕ್ಷಗಳಲ್ಲಿ ಈಗಾಗಲೇ ಬಿಡುಗಡೆಗೊಳಿಸಿ, ಉಳಿದ ಹಣ ರೂ.23.50 ಲಕ್ಷ (ಇಪ್ಪತ್ತಮೂರು ಲಕ್ಷ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರ ಮುಖಾಂತರ ಬೆಂಗಳೂರು ಲೋಕೋಪಯೋಗಿ ಇಲಾಖೆಯ ನಂ:2 ಕಟ್ಟಡಗಳ ವಿಭಾಗದ ಕಾರ್ಯಪಾಲಕ ಅಭಿಯಂತರರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202-04-800-1-01-139 ಜಿಲ್ಲಾ ರಂಗಮಂದಿರ ನಿರ್ಮಾಣ, ಕನ್ನಡ ಭವನ ನಿರ್ಮಾಣ (ಯೋಜನೆ) ಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹಾಗೂ ದಿನಾಂಕ: 5.9.2005ರ ಆಂತರಿಕ ಆರ್ಥಿಕ ಸಲಹೆಗಾರರು, ಅ.ಟಿ. ಸಂಖ್ಯೆ: ಶಿಇ 690 ಐಎಫ್(ಬಿಎ) 2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ಸುಮಿತ್ರಮ್ಮ**

ಪಿ.ಆರ್. 1389 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಆರ್ಥಿಕ ಸಚಿವಾಲಯ

**ಆದೇಶ ಸಂಖ್ಯೆ: ಎಫ್‌ಡಿ 48 ಎಸ್‌ಆರ್‌ಪಿ 2005, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2005**

**ವಿಷಯ:** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 26 ಎಸ್‌ಆರ್‌ಪಿ 2005, ದಿನಾಂಕ 19ನೇ ಮೇ 2005.

ಸರ್ಕಾರವು ದಿನಾಂಕ: 1.7.2005 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ.67 ರಿಂದ ಶೇ.71ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ಜುಲೈ 2005 ರಿಂದ ಮುಂದಕ್ಕೆ ಮತ್ತು ಮುಂದೆ ಮರು ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

3. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ. ಈ ಆದೇಶವು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ, ಮತ್ತು ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಯಲ್ಲಿರುವ ಬೋಧಕ ಸಿಬ್ಬಂದಿ ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿಗೂ ಅನ್ವಯಿಸುತ್ತದೆ.

4. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

(ಆ) 1999ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ, ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ ಸೇರುತ್ತವೆ.

5. ಮೂಲವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

6. ಪೂರ್ವ ಪರಿಷ್ಕೃತ ಯು.ಜಿ.ಸಿ., ಎ.ಐ.ಸಿ.ಟಿ.ಇ. ಮತ್ತು ಐ.ಸಿ.ಎ.ಆರ್. ವೇತನ ಶ್ರೇಣಿಗಳಲ್ಲಿ ಮುಂದುವರಿಯುತ್ತಿರುವ ಬೋಧಕ ಸಿಬ್ಬಂದಿ, ದೈಹಿಕ ಶಿಕ್ಷಣ ಸಿಬ್ಬಂದಿ ಹಾಗೂ ಗ್ರಂಥಪಾಲಕರ ಪ್ರಕರಣಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 96 ದಿನಾಂಕ: 8.5.1996 ರಲ್ಲಿ ದಿನಾಂಕ 1.1.1996ರ ವರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯು ಸಹ ಮೂಲ ವೇತನದಲ್ಲಿ ಸೇರುತ್ತದೆ.

7. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

8. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಭಿನ್ನ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಟಿ. ನಾಯ್ಕ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-2)

## FINANCE SECRETARIAT

**Order No. FD 48 SRP 2005, Bangalore, Dated 28th October 2005**

**Sub:** Dearness Allowance - Revision of rates

**Read:** G.O. No. FD 26 SRP 2005, dated 19th May 2005.

Government are pleased to sanction increase in the rates of Dearness Allowance from existing 67% to 71% of the basic pay to the State Government employees with effect from 1st July 2005.

2. The increase in Dearness Allowance admissible under this order is payable in cash from the month of July 2005 onwards until further orders.

3. These orders will apply to the full time Government employees, employees of Zilla Panchayats, work charged employees on regular time scale of pay, full time employees of aided educational institutions and Universities who are on regular time scales of pay. These orders will also apply to the Judicial Officers who are on FNJPC scales of pay and to the Teaching Staff, Librarians and Physical Education Personnel who are on UGC/AICTE/ICAR scales of pay.

4. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes:-

(a) Stagnation increment, if any, granted to him above the maximum of the scale of pay.

(b) Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

5. Basic Pay shall not include any emoluments other than those specified above.

6. In respect of Teachers, Librarians, Physical Education Personnel who are still continuing in the pre-revised UGC, AICTE and ICAR scales of pay, basic pay includes Dearness Allowance sanctioned up to 1.1.1996 vide G.O. No. FD 8 SRP 96 dated 8.5.1996.

7. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

8. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka,

P.R. 1516

**N.T. NAIK**

Deputy Secretary to Government, Finance Department (Services-2)

## INFRASTRUCTURE DEVELOPMENT SECRETARIAT

**Sub:** Release of funds for Construction of Road over Bridge / Road under Briadge - reg.

**Read:**
1. G.O. No. IDD 26 NSW 2003 dated 31.3.2003.
2. Letter No. W.359/CN/BNC dated 3.8.2005, from Chief Administrative Officer, (Construction) South Western Railway, Bangalore.
3. Letter from iDeCK No. iDeCK/2005-06/448 dated 4.8.2005.
4. G.O. No. IDD 63 IDM 2005 dated 25.5.2005.

**Preamble:-**

In G.O. read at Sl. No. (1) above, Government had accorded sanction for release of Rs.5.00 crores through iDeCK for onward release to the concerned Railway Authorities for construction of Road over Bridge / Road under Bridge appearing in the priority list annexed to the said Government Order.

2. The Chief Administrative Officer (Construction), SWR, Bangalore in his letter read at Sl. No. (2) above, requested for immediate deposit of Rs.26.71 crores for construction of RoB/RuB projects.

3. iDeCK in its letter read at Sl. No. (3) above has requested for immediate release of Rs.20.00 crores for implementing RoB / RuB projects in the State.

4. Government of Karnataka in their order read at Sl. No.(4) above have sanctioned the construction of RoBs / RuBs in the State as an on-going scheme.

5. It has been decided to release Rs.20.00 crores provided in the budget 2005-06 for construction of the RoB/RuB in the state. Hence this order.

**Government Order No. IDD 79 NSW 04 Bangalore, Dated 17th October 2005**

Government, after examining the proposal of the CAO, (Construction), South Western Railway and iDeCK are pleased to release Rs.20.00 crores (Rupees twenty crores only) for construction of RoBs and RuBs in the State. Out of this, Rs.13.11 crores is released for the construction of RoBs / RuBs in Mandya, Ramanagaram, Pandavapura, White field and the balance amount of Rs.6.89 crores towards construction of other RoB / RuBs.

2. This amount shall be met under the Head of Account "5465-01-190-3-04-K RIDE-RoB/RuB projects - 211 Investment (Plan)"

3. The Chief Finance Officer (CFO) of iDeCK shall draw this amount on a payees receipt duly countersigned by the Under Secretary to Government, Infrastructure Development Department.

4. This order issues with the concurrence of FD vide its U.O. Note No. FD/1536/Exp-I/2005 dated 23.9.2005.

By Order and in the name of the Governor of Karnataka,

P.R. 1432

**T.B. RENUKAPRASAD**

Under Secretary to Government,
Infrastructure Development Department.

## ಆರ್ಥಿಕ ಸಚಿವಾಲಯ

**ವಿಷಯ:** ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣಾಭಿವೃದ್ಧಿ ಇಲಾಖೆ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣ ಭಾಗ್ಯ ಜಲನಿಗಮ ಇತ್ಯಾದಿ ಕಚೇರಿಗಳಲ್ಲಿ ಉನ್ನತೀಕರಿಸಲಾದ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಆಇ 150 ರಾಲೆಪ 98, ದಿನಾಂಕ:2.6.2000
2. ಸರ್ಕಾರಿ ಆದೇಶ ಸಂಖ್ಯೆ:ಆಇ 150 ರಾಲೆಪ 98, ದಿನಾಂಕ:10.7.01
3. ಸರ್ಕಾರಿ ಆದೇಶ ಸಂಖ್ಯೆ:ಆಇ 311 ರಾಲೆಪ 03, ದಿನಾಂಕ:18.12.03
4. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ:ಸಿಎಸ್ಎ 1 ಎಏಎ 2005, ದಿನಾಂಕ 5.7.05

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:2.6.2000ದ ಸರ್ಕಾರಿ ಆದೇಶದಲ್ಲಿ ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣಾಭಿವೃದ್ಧಿ ಇಲಾಖೆಯ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣಭಾಗ್ಯ ಜಲನಿಗಮ ಇತ್ಯಾದಿ ಕಚೇರಿಗಳಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ನೇರ (ಎನ್ಕೇಡರ್ಡ್) ಹುದ್ದೆಗಳೆಂದು ಪರಿಗಣಿಸಲಾಗಿರುವ 229 ಲೆಕ್ಕಾಧೀಕ್ಷಕರ ಹುದ್ದೆಗಳನ್ನು ಲೆಕ್ಕ ಪರಿಶೋಧನಾಧಿಕಾರಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಲಾಗಿತ್ತು. ಈ ಹುದ್ದೆಗಳನ್ನು ದಿನಾಂಕ: 2.6.2001ರ ನಂತರವೂ ಮುಂದುವರೆಸುವ ಅಗತ್ಯತೆಯನ್ನು ಪರಿಶೀಲಿಸಿ, ಮೇಲೆ (2)ರಲ್ಲಿ ಓದಲಾದ ದಿನಾಂಕ:10.7.2001ರ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:2.6.2001 ರಿಂದ ದಿನಾಂಕ: 1.6.2003 ರವರೆಗೆ ಮುಂದುವರೆಸಲಾಗಿತ್ತು.

ನಂತರ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:2.6.2003 ರಿಂದ ದಿನಾಂಕ: 1.6.2005 ರವರೆಗೆ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಲಾಗಿತ್ತು. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರು ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಈ ಹುದ್ದೆಗಳನ್ನು ದಿನಾಂಕ:2.6.2005 ರಿಂದ ದಿನಾಂಕ:1.6.2010 ರವರೆಗೆ ಮುಂದುವರೆಸಿ ಆದೇಶಿಸುವಂತೆ ಕೋರಿರುತ್ತಾರೆ. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರ ಪ್ರಸ್ತಾವನೆಯನ್ನು ಸವಿವರವಾಗಿ ಪರಿಶೀಲಿಸಿದ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 251 ರಾಲೆಪ 2005, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2005**

ಮೇಲೆ ಪ್ರಸ್ತಾವನೆಯಲ್ಲಿ ಹೇಳಿರುವ ವಿವರಗಳ ಮೇರೆಗೆ ಸರ್ಕಾರಿ ಆದೇಶ ಸಂಖ್ಯೆ:ಆಇ 150 ರಾಲೆಪ 98, ದಿನಾಂಕ:2.6.2000ರ ಅನುಬಂಧದಲ್ಲಿ ನಮೂದಿಸಿರುವ ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣಾಭಿವೃದ್ಧಿ ಇಲಾಖೆಯ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣಭಾಗ್ಯ ಜಲನಿಗಮ ಇತ್ಯಾದಿ ಕಚೇರಿಗಳಲ್ಲಿನ ರಾಜ್ಯ ಲೆಕ್ಕಪತ್ರ ಇಲಾಖೆಯ ನೇರ (ಎನ್‌ಕೇಡರ್) ಹುದ್ದೆಗಳೆಂದು ಪರಿಗಣಿಸಿರುವ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯಿಂದ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಉನ್ನತೀಕರಿಸಲಾಗಿರುವ 229 ಹುದ್ದೆಗಳನ್ನು ದಿನಾಂಕ: 2.6.2005 ರಿಂದ ದಿನಾಂಕ:1.6.2007 ರವರೆಗೆ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1433

**ಎನ್. ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ)

## COMMERCE AND INDUSTRIES SECRETARIAT

**CORRIGENDUM No. CI 142 SGF 05, Bangalore, Dated: 10th October 2005**

The following 6 villages in Muddebihal Taluk and 12 villages in Basavanbagewadi Taluk in Bijapur District are deleted from the list of villages allotted to M/s Nirani Sugars Ltd., Mudhol Taluk, Bagalkot District in Schedule-I of the Government Notification No. CI 142 SGF 05 Dt.21.7.05.

**Muddebihal Taluk Bijapur District**

1. Masuthi
2. Yalugura
3. Budihal
4. Mudura
5. Nagarala
6. Handragalla

**Basavanbagewadi Taluk in Bijapur District**

1. Ingleshwar
2. Nagavada
3. Ronihala
4. Kollara
5. Halladagenura
6. Kudarisalavadagi
7. Kanala
8. Hoo.Hipparagi
9. Mulawada
10. Kodagi
11. Managoli
12. Ukkali

By Order and in the name of the Governor of Karnataka,

P.R. 1437

**P. ANANDA KUMAR**

Desk Officer (Sugar), Commerce & Industries Department.

## ಕಂದಾಯ ಸಚಿವಾಲಯ

**ತಿದ್ದುಪಡಿ ಸಂ.ಕಂಇ 128 ಎಲ್‌ಆರ್‌ಎಂ 2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 128 ಎಲ್‌ಆರ್‌ಎಂ 2005 ದಿನಾಂಕ: 29.8.2005ರ ಅಧಿಸೂಚನೆಯಲ್ಲಿ ಶ್ರೀ ಸಿದ್ಧಾರೂಢ ಸ್ವಾಮಿ ಸಿದ್ಧಾಶ್ರಮ ಟ್ರಸ್ಟ್, ರಾಣೆಬೆನ್ನೂರು ಎಂಬುದರ ಬದಲಿಗೆ ಶ್ರೀ ಸಿದ್ಧಾರೂಢಸ್ವಾಮಿ ಸಿದ್ಧಾಶ್ರಮ ಟ್ರಸ್ಟ್ ಕಮಿಟಿ, ಖಂಡೇರಾಯನ ಹಳ್ಳಿ ಎಂದೂ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1438

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಭೂಸುಧಾರಣೆ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸಂಖ್ಯೆ: ಆಕುಕ 313 ಹೆಚ್ ಎಸ್ ಎಂ 2004, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2005**

**ಅಧಿಕೃತ ಜ್ಞಾಪನ ಪತ್ರ**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಪದವೀಧರ ಫಾರ್ಮಸಿಸ್ಟ್‌ರುಗಳ ದಿ: 1.4.2004 ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಪದವೀಧರ ಫಾರ್ಮಸಿಸ್ಟ್‌ರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿ:1.4.2004 ರಲ್ಲಿದ್ದಂತೆ ಪ್ರಕಟಿಸಲಾಗಿದೆ. ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 313 ಹೆಚ್.ಎಸ್.ಎಂ. 2005 ದಿನಾಂಕ: 9.3.2005ರಲ್ಲಿ ಪ್ರಕಟಿಸಿ ಈ ಜೇಷ್ಠತಾ ಪಟ್ಟಿಯಿಂದ ಬಾಧಿತರಾದ ನೌಕರರುಗಳಿಂದ ಆಕ್ಷೇಪಣೆ / ಸಲಹೆಗಳನ್ನು ಲಿಖಿತ ಮೂಲಕ 30 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯಿಂದ ಬಾಧಿತರಾದ ನೌಕರರುಗಳು ಸಲ್ಲಿಸಿದ್ದ ಆಕ್ಷೇಪಣೆ / ಸಲಹೆಗಳನ್ನು ಸರ್ಕಾರವು ಪರಿಶೀಲಿಸಿ ದಿನಾಂಕ: 1.4.2004 ರಲ್ಲಿದ್ದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪದವೀಧರ ಫಾರ್ಮ್‌ಸಿಸ್ಟರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಅಧಿಕಾರಿ ಹೆಸರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಕೆಲಸ ಮಾಡುತ್ತಿರುವ ದಿನಾಂಕ |
|---|---|---|---|---|
| 1. | ಬಿ.ಜಿ. ಹಾವನೂರು | 1-6-1950 | 17-3-1978 | 17-3-1978 |
| 2. | ಶೇಷಗಿರಿ ಜಿ.ಕೆ. | 11-5-1951 | 16-8-1984 | 16-8-1984 |
| 3. | ಎಂ.ಎಸ್. ಅನಂತರಾಮು | 18-9-1956 | 16-8-1984 | 16-8-1984 |
| 4. | ದೇಶಪಾಂಡೆ ಎಸ್.ಎನ್. | 25-10-1953 | 16-8-1984 | 16-8-1984 |
| 5. | ಗುರುಪ್ರಸಾದ್ ಜಿ.ಮೊಕಾಶಿ | 7-12-1953 | 16-8-1984 | 16-8-1984 |
| 6. | ಗಣಪತಿ ವೆಂಕಟಪ್ಪ ಹೆಗ್ಗಡೆ | 1-5-1952 | 16-8-1984 | 16-8-1984 |
| 7. | ಶಿವಶರಣಪ್ಪ ಬಿರಾಜದಾರ | 1-6-1956 | 29-9-1984 | 29-9-1984 |
| 8. | ಸಿ.ಹೆಚ್. ಕಟ್ಟೀಮನಿ | 5-12-1956 | 29-9-1984 | 29-9-1984 |
| 9. | ಭಾವಲತ್ತಿ ಎಂ.ಬಿ. | 1-6-1954 | 29-9-1984 | 29-9-1984 |
| 10. | ಸಿ. ಅನಂತಕೃಷ್ಣ | 25-12-1946 | 29-9-1984 | 29-9-1984 (ನಿವೃತ್ತರಾಗಿದ್ದಾರೆ) |
| 11. | ವಂದಕುದ್ರಿ ಬಿ.ವಿ. | 5-3-1954 | 29-9-1984 | 29-9-1984 |
| 12. | ರೆಹಮತ್ ಉಲ್ಲಂ ಷರೀಫ್ | 10-1-1947 | 29-9-1984 | 29-9-1984 (ನಿವೃತ್ತರಾಗಿದ್ದಾರೆ) |
| 13. | ಸಬರದ್ ಬಸವರಾಜ್ | 22-7-1961 | 26-5-1993 | 26-5-1993 |

**ಆರ್. ಲೀಲಾವತಿ**

ಪಿ.ಆರ್. 1440 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಮಾನ್ಯ ಉಪ ಮುಖ್ಯ ಮಂತ್ರಿಯವರ ಟಿಪ್ಪಣಿ ಸಂಖ್ಯೆ: ಉಮುಮಂ/ಟಿ/1503/2005, ದಿನಾಂಕ: 1.9.2005.

**ಪ್ರಸ್ತಾವನೆ:**

ಮಾನ್ಯ ಉಪ ಮುಖ್ಯ ಮಂತ್ರಿಯವರು ಮೇಲೆ ಓದಲಾಗಿರುವ ದಿನಾಂಕ:1.9.2005ರ ಟಿಪ್ಪಣಿಯಲ್ಲಿ ಉಪ ಮುಖ್ಯ ಮಂತ್ರಿಯವರ ಸಚಿವಾಲಯಕ್ಕೆ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯ ಜೊತೆಗೆ ಹೆಚ್ಚುವರಿಯಾಗಿ ಹುದ್ದೆಗಳನ್ನು ದಿನಾಂಕ: 1.9.2005 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 59 ಸಸಿವಿ 2005, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2005

ಮಾನ್ಯ ಉಪ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಹುದ್ದೆಗಳೊಂದಿಗೆ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:1.9.2005 ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಪ್ರಸ್ತುತ ಉಪ ಮುಖ್ಯ ಮಂತ್ರಿಯವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಸಾರ್ವಜನಿಕ ಸಂಪರ್ಕಾಧಿಕಾರಿ (ಗ್ರೂಪ್-ಎ) | 01 ಹುದ್ದೆ |
| 2. | ಹೆಚ್ಚುವರಿ ಆಪ್ತ ಕಾರ್ಯದರ್ಶಿ (ಗ್ರೂಪ್-ಬಿ) | 01 ಹುದ್ದೆ |
| 3. | ಶಾಖಾಧಿಕಾರಿ (ಗ್ರೂಪ್-ಬಿ ಅಥವಾ ತತ್ಸಮಾನ ಹುದ್ದೆ) | 03 ಹುದ್ದೆಗಳು |
| 4. | ಗ್ರೂಪ್-ಸಿ ಹುದ್ದೆಗಳು (ಶೀಘ್ರಲಿಪಿಗಾರರು, ಬೆರಳಚ್ಚುಗಾರರು, ಸಹಾಯಕರು) | 18 ಹುದ್ದೆಗಳು |
| 5. | ಚಾಲಕರು | 02 ಹುದ್ದೆಗಳು |
| 6. | ಗ್ರೂಪ್-ಡಿ ಹುದ್ದೆಗಳು | 10 ಹುದ್ದೆಗಳು |
| | **ಒಟ್ಟು** | **35 ಹುದ್ದೆಗಳು** |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1783/ವೆಚ್ಚ-5/2005, ದಿನಾಂಕ: 18.10.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1443 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಜಲಸಂಪನ್ಮೂಲ ಸಚಿವಾಲಯ

### ತಿದ್ದೋಲೆ ಸಂಖ್ಯೆ: ಜಸಂಇ 61 ಎನ್‌ಹೆಚ್‌ಪಿ 2005, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 05

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ:ಜಸಂಇ 102 ಎನ್‌ಹೆಚ್‌ಪಿ 2004, ದಿ:24.6.04

ಉಲ್ಲೇಖಿತ ಆದೇಶದಲ್ಲಿ ಹೇಮಾವತಿ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿದ್ದು ಈ ಸಮಿತಿಯಲ್ಲಿದ್ದ ಶ್ರೀ ಬಿ.ಎಲ್. ಜಗದೀಶ್, ವಿಧಾನ ಪರಿಷತ್ ಸದಸ್ಯರು ಇವರ ಬದಲಾಗಿ ಶ್ರೀ ವಿ.ಎಸ್. ಉಗ್ರಪ್ಪ ವಿಧಾನ ಪರಿಷತ್ ಸದಸ್ಯರು ಇವರನ್ನು ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1446 **ಎ.ಎಸ್. ರಂಗರಾಜು**

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ ಎಂಎಂಐ-3), ಜಲಸಂಪನ್ಮೂಲ ಇಲಾಖೆ.

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 676 ಪಿಪಿಇ 2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2005**

ಸಮಸಂಖ್ಯೆಯ ಆದೇಶ ದಿನಾಂಕ 24.8.05ರ ಕ್ರಮ ಸಂಖ್ಯೆ 9ರ ಅಂಕಣ 4ರಲ್ಲಿ ಸಿ.ಸಿ.ಸಂಖ್ಯೆ 92/05ರ ಎಂಬುದರ ಬದಲಾಗಿ ಸಿ.ಸಿ. ಸಂಖ್ಯೆ 82/05 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್. 1451 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು.ಮತ್ತು ಕಾಫಿಪೋಸ ಮತ್ತು ಅಭಿಯೋಗ)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರಿಂಗ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಶಾ:ಮೇಲ್ದರ್ಜೆ:ಮಂಡ್ಯ:ಸಇಂ-5:30:2004-05, ದಿನಾಂಕ: 17.1.05.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಶ್ರೀರಂಗಪಟ್ಟಣ-ಬೀದರ್ ರಾಜ್ಯ ಹೆದ್ದಾರಿ ಸಂಖ್ಯೆ:19ರ ಸರಪಳಿ 72.0ನೇ ಕಿಮೀನ ಚುಂಚನಹಳ್ಳಿಯಿಂದ ಆದಿಚುಂಚನಗಿರಿ ಕ್ಷೇತ್ರಕ್ಕೆ ಹೋಗುವ ರಸ್ತೆ ಸರಪಳಿ 0.00 ರಿಂದ 5.50 ಕಿಮೀ ವರೆಗಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಶ್ರೀರಂಗಪಟ್ಟಣ-ಬೀದರ್ ರಾಜ್ಯ ಹೆದ್ದಾರಿ ಸಂಖ್ಯೆ:19ರ ಸರಪಳಿ 72.0ನೇ ಕಿಮೀನ ಚುಂಚನಹಳ್ಳಿಯಿಂದ ಆದಿಚುಂಚನಗಿರಿ ಕ್ಷೇತ್ರಕ್ಕೆ ಹೋಗುವ ರಸ್ತೆ ಸರಪಳಿ 0.00 ರಿಂದ 5.50 ಕಿಮೀ ವರೆಗಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1456 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

## ENERGY SECRETARIAT

**Sub:** Release of R.E. Subsidy to Karnataka Power Transmission Corporation Limited & Karnataka Power Corporation Limited, during 2005-2006 orders reg.

**Preamble:-**

The Karnataka Power Transmission Corporation Limited and Karnataka Power Corporation Limited have requested the Government to release the budgetary support towards Rural Electrification Subsidy so as to enable them to clear the dues. Hence, this order.

**Government Order No. EN 63 EEB 2005, Bangalore, Dated: 17th October 2005**

Government is pleased to release a sum of Rs.100.00 Crores (rupees one hundred crores only) as R.E. Subsidy to Karnataka Power Transmission Corporation Limited under the Head of Account "2801-80-101-1-04-106 Subsidy" (Non Plan). The Karnataka Power Transmission Corporation Limited should pass on the entire amount of Rs. 100.00 Crores to Karnataka Power Corporation Limited.

The Karnataka Power Transmission Corporation Limited shall obtain the counter signature of Principal Secretary to Government Energy Department on payee's receipt bill and draw the amount.

This order is issued with the concurrence of Finance Department vide their U.O. Note No: FD 800 Exp-I 2005, dated 10.10.2005.

By Order and in the name of the Governor of Karnataka,

P.R. 1457 **SURESH B. KRISHNAPPANAVAR**

Under Secretary to Government, Energy Department.

## ಒಳಾಡಳಿತ ಸಚಿವಾಲಯ

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿ ಆಂತರಿಕ ಲೆಕ್ಕ ಪರಿಶೋಧಕರ ಶಾಖೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಡಿಪಿಎನ್:ಲೆಕ್ಕ-1: 260:2004-05 ದಿನಾಂಕ:7.3.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ:7.3.2005ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 286 ವೇತನ ಬಟವಾಡೆ ಅಧಿಕಾರಿಗಳ ಕಛೇರಿಗಳು ಇದ್ದು ಪ್ರತಿಯೊಂದು ವೇತನ ಬಟವಾಡೆ ಮಾಡುವ ಕಛೇರಿಯ ಲೆಕ್ಕ ಪರಿಶೋಧನೆಯನ್ನು ಕನಿಷ್ಠ ವರ್ಷಕ್ಕೆ ಒಂದು ಬಾರಿಯಾದರೂ ಮಾಡುವ ಅಗತ್ಯವಿರುತ್ತದೆ ಎಂದು ಡಿಸೆಂಬರ್ 2004ರಲ್ಲಿ ಮಹಾಲೇಖಪಾಲರು ಲೆಕ್ಕ ಪರಿಶೋಧನಾ ಕಾರ್ಯವನ್ನು ಕೈಗೊಂಡಾಗ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿ ಲೆಕ್ಕಗಳನ್ನು ಪರಿಶೋಧನೆ ಮಾಡಲು ಆಂತರಿಕ ಲೆಕ್ಕ ಪರಿಶೋಧನಾ ಶಾಖೆಯನ್ನು ಪ್ರಾರಂಭಿಸುವ ಬಗ್ಗೆ ಅವಲೋಕಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಸದರಿ ಇಲಾಖೆಯಲ್ಲಿ 7 ವಲಯಮಟ್ಟದ ಕಛೇರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರತಿಯೊಂದು ವಲಯ ಮಟ್ಟದ ಕಛೇರಿಗಳ ವ್ಯಾಪ್ತಿಯಲ್ಲಿ 3 ರಿಂದ 4 ಜಿಲ್ಲೆಗಳ ಕಛೇರಿಗಳು ಆಡಳಿತ ವ್ಯಾಪ್ತಿಯಲ್ಲಿ ಬರುತ್ತವೆ. ಈ ಕಛೇರಿಯಲ್ಲಿ ತುಂಬಾ ಕಡಿಮೆ ಹುದ್ದೆಗಳು ಇರುವುದರಿಂದ ಎಲ್ಲಾ ಕಛೇರಿಗಳ ಲೆಕ್ಕ ಪರಿಶೋಧನಾ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ ಕಾರಣ ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡ ಒಂದು ಆಂತರಿಕ ಲೆಕ್ಕ ಪರಿಶೋಧನಾ ಶಾಖೆಯನ್ನು ಸೃಜಿಸುವಂತೆ ಕೋರಿಕೆಯನ್ನು ಸಲ್ಲಿಸಲಾಗಿದೆ.

1. ಆಡಳಿತಾಧಿಕಾರಿ ಹುದ್ದೆ - 1 (ವೇತನ ಶ್ರೇಣಿ ರೂ. 5575 - 10620)
2. ಅಧೀಕ್ಷಕ ಹುದ್ದೆ - 2 (ವೇತನ ಶ್ರೇಣಿ ರೂ. 5200 - 9580)
3. ಪ್ರ.ದ.ಸ. - 2 (ವೇತನ ಶ್ರೇಣಿ ರೂ. 3850 - 7050)
4. ಶೀಘ್ರಲಿಪಿಗಾರರು - 2 (ವೇತನ ಶ್ರೇಣಿ ರೂ. 3850 - 7050)

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 168 ಪಿಪಿಇ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿ ಇಲಾಖೆಯ ವಲಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಕಛೇರಿಗಳಲ್ಲಿನ ಆಂತರಿಕ ಲೆಕ್ಕ ಪರಿಶೋಧನಾ ಕಾರ್ಯವನ್ನು ನಿರ್ವಹಿಸಲು ಆಂತರಿಕ ಲೆಕ್ಕ ಪರಿಶೋಧಕರ ಶಾಖೆ (Internal Audit wing) ಅನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಹುದ್ದೆಗಳ ಎದುರು ಸೂಚಿಸಿದ ರೀತಿಯಲ್ಲಿ ಭರ್ತಿ ಮಾಡುವ ಷರತ್ತಿಗೆ ಒಳಪಟ್ಟು ಸೃಜಿಸಲು ಈ ಮೂಲಕ ಆದೇಶಿಸಿದೆ. ಸದರಿ ಆದೇಶವು ಕೂಡಲೇ ಜಾರಿಗೆ ಬರುವಂತೆ ಹಾಗೂ ಹುದ್ದೆಗಳು ಎರಡು ವರ್ಷ ಅವಧಿಗೆ ಮಾತ್ರ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ.

| | | |
|---|---|---|
| 1) ಆಡಳಿತಾಧಿಕಾರಿ ಹುದ್ದೆ | - 1 (ವೇತನ ಶ್ರೇಣಿ ರೂ. 5575 - 10620) | ರಾಜ್ಯ ಲೆಕ್ಕ ಪತ್ರ ಇಲಾಖೆಯ ಅಧಿಕಾರಿಗಳಿಂದ ಪ್ರತಿನಿಯೋಜನೆಯ ಮೇರೆಗೆ ಭರ್ತಿ ಮಾಡತಕ್ಕದ್ದು |
| 2) ಲೆಕ್ಕಪತ್ರ ಅಧೀಕ್ಷಕ ಹುದ್ದೆ | - 1 (ವೇತನ ಶ್ರೇಣಿ ರೂ. 5200-9580) | |

ಆಂತರಿಕ ಲೆಕ್ಕಪರಿಶೋಧನಾ ಕಾರ್ಯಕ್ಕೆ ಅಗತ್ಯವಾದ ಪ್ರ.ದ.ಸ. ಮತ್ತು ಶೀಘ್ರಲಿಪಿಗಾರರನ್ನು ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಹುದ್ದೆಗಳಿಂದಲೇ ಪೂರೈಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ (ವೆಚ್ಚ-7) ಟಿಪ್ಪಣಿ ಸಂಖ್ಯೆ:ಎಫ್‌ಡಿ 495 ವೆಚ್ಚ-7:05 ದಿನಾಂಕ:18-25-6-2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಪಿ.ಆರ್. 1463

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು.ಮತ್ತು ಕಾಫಿಪೋಸ್ ಮತ್ತು ಅಭಿಯೋಗ)

## HEALTH & FAMILY WELFARE SECRETARIAT

**ADDENDUM No. HFW 125 FPR 2005, Bangalore, Dated: 15th October 2005**

In Government Order No: HFW 125 FPR 2005 dated: 15.9.2005 after terms reference of the Committee at Sl. No. 7 the following terms is incorporated at Sl. No. 8 in the aforesaid government order.

"It shall be the duty of the quality Assurance Committee to collect and publish six monthly reports of the numbers of persons sterilized as well as the number of deaths or complications arising out of the sterilization".

By Order and in the name of the Governor of Karnataka,

**R. LEELAVATHY**

P.R. 1482

Under Secretary to Government,

Health &Family Welfare Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಆಕುಕ 75 ಎಫ್‌ಪಿಎಸ್ 2005, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2005**

**ವಿಷಯ:** ಸರ್ಕಾರಿ/ಖಾಸಗಿ ಆಸ್ಪತ್ರೆಗಳಲ್ಲಿ/ಸಾರ್ವಜನಿಕ ಸ್ಥಳಗಳಲ್ಲಿ ತಾಯಂದಿರು ತ್ಯಜಿಸಿದ ಮಕ್ಕಳನ್ನು ಶಿಶು ಕೇಂದ್ರ/ಅರ್ಹ ಸಂಸ್ಥೆಗಳಲ್ಲಿ ದಾಖಲಿಸುವ ಬಗ್ಗೆ.

ಕರ್ನಾಟಕ ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ/ಖಾಸಗಿ ಆಸ್ಪತ್ರೆಗಳಲ್ಲಿ/ಶುಶ್ರೂಷ ಕೇಂದ್ರ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ತಾಯಂದಿರು ತ್ಯಜಿಸಿದ ಮಕ್ಕಳನ್ನು ಆಸ್ಪತ್ರೆ ಸಿಬ್ಬಂದಿಯವರು ಹಾಗೂ ಇತರರು ಅಕ್ರಮವಾಗಿ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಈ ರೀತಿಯ ಪ್ರಕರಣಗಳು ದಿನೇ ದಿನೇ ಹೆಚ್ಚುತ್ತಿದ್ದು ಲಾಭದಾಯಕ ವ್ಯವಹಾರವಾಗಿರುತ್ತದೆ. ಇಂತಹ ಕ್ರೂರ ಹಾಗೂ ಘೋರ ಕೃತ್ಯವಾದ ಶಿಶು ಮಾರಾಟವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆ. ಇದನ್ನು ತಡೆಗಟ್ಟುವ ಸಲುವಾಗಿ ಜಿಲ್ಲಾ ವ್ಯಾಪ್ತಿಯಲ್ಲಿ ಹಾಗೂ ಇತರೆ ಕಡೆ ದೊರಕುವ ಮಕ್ಕಳನ್ನು ಮಕ್ಕಳ ಕಲ್ಯಾಣ ಸಮಿತಿಯ ಮೂಲಕ ಸರ್ಕಾರದ ವತಿಯಿಂದ ನಡೆಸಲ್ಪಡುತ್ತಿರುವ ಶಿಶು ಗೃಹಗಳಿಗೆ ಹಾಗೂ ಅರ್ಹ ಸಂಸ್ಥೆಗಳಿಗೆ ತಪ್ಪದೆ ದಾಖಲಿಸುವಂತೆ ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿದೆ. ಹಾಗೂ ಈ ಸಂಬಂಧ, ಸಂಬಂಧಪಟ್ಟ ಜಿಲ್ಲೆಯ ಅಧಿಕಾರಿಗಳು, ಮಹಿಳಾ ಮತ್ತು

ಮಕ್ಕಳ ಅಭಿವೃದ್ಧಿ ಇಲಾಖೆ ಇವರೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಳ್ಳತಕ್ಕದ್ದು, ಹಾಗೂ ಈ ಸೂಚನೆಯನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು ತಪ್ಪಿದ್ದಲ್ಲಿ ಸದರಿ ವಿಷಯವನ್ನು ಗಂಭೀರವಾಗಿ ಪರಿಗಣಿಸಲಾಗುವುದೆಂದು ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**

ಪಿ.ಆರ್. 1484 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಮಹೀನ್ ಅಮೀನ್ ಬೇಗ್, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೆಚ್.ಡಿ. ಕೋಟೆ, ಮೈಸೂರು ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ: ಮೈವಿ: 24: 2004-05 ದಿನಾಂಕ:24.3.2005.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಡಾ: ಮಹೀನ್ ಅಮೀನ್ ಬೇಗ್, ದಂತ ಆರೋಗ್ಯಾಧಿಕಾರಿ, ಇವರು ಸರ್ಕಾರಿ ಸೇವೆಗೆ ಸೇರಿ ದಿನಾಂಕ: 8.10.2000 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 9.4.2004 ರಿಂದ 11.4.2004 ರವರೆಗೆ 3 ದಿನಗಳ ಅನುಮತಿ ರಜೆ ಕೋರಿದ್ದು, ತದನಂತರ ದಿನಾಂಕ: 12.4.04 ರಿಂದ 11.5.04 ರವರೆಗೆ 30 ದಿನಗಳ ಗಳಿಕೆ ರಜೆ ಕೋರಿರುವುದನ್ನು ನಿರಾಕರಿಸಿದರೂ ಸಹ ದಿನಾಂಕ: 9.4.04 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರಿಗೆ ಕರ್ತವ್ಯಕ್ಕೆ ಹಾಜರಾಗಲು ಕರೆನೋಟೀಸ್ ನೀಡಿದ್ದಾಗ್ಯೂ ಸದರಿ ಅಧಿಕಾರಿಯು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆದ್ದರಿಂದ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ 120 ದಿನಗಳಿಗೂ ಮೀರಿ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ ಸೇವಾವಧಿ) ನಿಯಮಗಳು 1977ರ ನಿಯಮ 6(1) (2)ರ ಅಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿಯವರನ್ನು ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 98 ಹೆಚ್‌ಎಸ್‌ಡಿ 2005, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಮಹೀನ್ ಆಮೀನ್ ಬೇಗ್, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹೆಚ್.ಡಿ. ಕೋಟೆ, ಮೈಸೂರು ಜಿಲ್ಲೆ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಗೈರುಹಾಜರಿಯಾಗಿದ್ದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ಉಪ ನಿಯಮ 6ರ ಅಡಿಯಲ್ಲಿ ದಿನಾಂಕ: 9.4.2004 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್. 1485 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ಎರಡು ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಪತ್ರ ಸಂ. ಮುಇ: ಸಂಕದ: ರಶಾ:ಸಇಂ1:2005-06 ದಿನಾಂಕ:7.10.05

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ದಿನಾಂಕ: 7.10.2005ರ ಪತ್ರದಲ್ಲಿ ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:212 ಸರಪಳಿ 220.40 ಕಿಮೀ ನಿಂದ ವರುಣಾ ಹೊಸಕೋಟೆ ಸುತ್ತೂರು ಬಿಳಿಗೆರೆ ಮಾರ್ಗವಾಗಿ ರಾಜ್ಯ ಹೆದ್ದಾರಿ 84ನ್ನು ಸೇರುವ ರಸ್ತೆಯ ಉದ್ದ-17.25 ಕಿಮೀ ಮತ್ತು ರಾಜ್ಯ ಹೆದ್ದಾರಿ 84 ರಿಂದ ಕುಪ್ಪರವಳ್ಳಿ ಮಾರ್ಗವಾಗಿ ಸುತ್ತೂರು ಸೇರುವ ರಸ್ತೆ ಉದ್ದ-4.00 ಕಿಮೀ ಉದ್ದದ 2 ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 172 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಇವರ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು ಮೇಲ್ದರ್ಜೆಗೇರಿಸಿ ರಾಜ್ಯಹೆದ್ದಾರಿ 84-ಎ ಹಾಗೂ 84-ಬಿ ಎಂದು ಘೋಷಿಸಲಾಗಿದೆ.

1) ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:212 ಸರಪಳಿ 220.40 ಕಿಮೀ ನಿಂದ ವರುಣಾ ಹೊಸಕೋಟೆ ಸುತ್ತೂರು ಮಾರ್ಗವಾಗಿ ರಾಜ್ಯ ಹೆದ್ದಾರಿ 84ನ್ನು ಬಿಳಿಗೆರೆ ಬಳಿ ಸೇರುವ ರಸ್ತೆಯನ್ನು 84-ಎ ಎಂದು ಘೋಷಿಸಲಾಗಿದೆ. (ಉದ್ದ-17.25 ಕಿಮೀ)
2) ರಾಜ್ಯ ಹೆದ್ದಾರಿ 84ರ ಕುಪ್ಪರವಳ್ಳಿಯಿಂದ ಸುತ್ತೂರು ಸೇರುವ ರಸ್ತೆಯನ್ನು ರಾಜ್ಯ ಹೆದ್ದಾರಿ 84-ಬಿ ಎಂದು ಘೋಷಿಸಲಾಗಿದೆ. (ಉದ್ದ-4.00 ಕಿಮೀ)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1486 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ತಿದ್ದುಪಡಿ ಸಂಖ್ಯೆ: ಲೋಇ 25 ಪಿಡಬ್ಲ್ಯೂಸಿ 2005, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2005**

ಸರ್ಕಾರದ ಆದೇಶ ಸಂಖ್ಯೆ: ಲೋಇ 31 ಪಿಡಬ್ಲ್ಯೂಸಿ 2004 ದಿನಾಂಕ: 7.10.2004 ರ ಆದೇಶ ಭಾಗದಲ್ಲಿ ಶ್ರೀ ಪ್ರಭಾಕರ ಗೊಬ್ಬೂರ್, ಪದವೀಧರ ಇಂಜಿನಿಯರ್‌ರವರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ "ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ಪರಿಗಣಿಸುವುದು" ಎಂದು ಆದೇಶಿಸಿರುವುದನ್ನು ಮಾರ್ಪಡಿಸಿ "ಸದರಿ ನೌಕರರು ಸತತ 10 ವರ್ಷಗಳ ದಿನಗೂಲಿ ಸೇವೆಯನ್ನು ಪೂರೈಸಿ ಸಕ್ರಮಗೊಂಡ ದಿನಾಂಕದಿಂದ ಅಂದರೆ ದಿನಾಂಕ 1.4.2002 ರಿಂದಲೇ ಸೇವಾ ಹಿರಿತನ ಹಾಗೂ ಬಾಕಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆಂದು" ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟರಸಪ್ಪ**
ಪಿ.ಆರ್. 1487 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ. ಶಿವಕುಮಾರಸ್ವಾಮಿ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಪ್ರಸ್ತುತ ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ಬೈಲಹೊಂಗಲ ಇವರಿಗೆ 2003-04 ಬ್ಲಾಕ್ ಅವಧಿಗೆ 30 ದಿನಗಳು ಗಳಿಕೆ ರಜೆಗೆ ನಗದೀಕರಣ ಮಂಜೂರಾತಿ ಬಗ್ಗೆ.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಬೆಳಗಾವಿ ಇವರ ಪತ್ರ ಸಂಖ್ಯೆ: ಜಿಪಂ.ತಾಪಸ:ಸಿಬ್ಬಂದಿ: ವಿವ:91 2002-03, ದಿನಾಂಕ:27.7.2004 ಮತ್ತು 1.3.2005.

**ಪ್ರಸ್ತಾವನೆ:**

ಶ್ರೀ ಎಂ. ಶಿವಕುಮಾರಸ್ವಾಮಿ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಪ್ರಸ್ತುತ ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ಬೈಲಹೊಂಗಲ ಇವರು ದಿನಾಂಕ: 17.7.2004ರ ಅವರ ಮನವಿಯಲ್ಲಿ 2003-04 ಬ್ಲಾಕ್ ಅವಧಿಯಲ್ಲಿ ದಿನಾಂಕ: 1.8.2004 ರಿಂದ 30 ದಿನಗಳು ಗಳಿಕೆ ರಜೆಗೆ ನಗದೀಕರಣವನ್ನು ಮಂಜೂರು ಮಾಡುವಂತೆ ಕೋರಿರುವ ಮೇರೆಗೆ ಮೇಲೆ ಓದಲಾದ (1) ರಲ್ಲಿನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಬೆಳಗಾವಿ ಇವರು ದಿನಾಂಕ: 27.7.2004 ರಲ್ಲಿನ ಪತ್ರದಲ್ಲಿ ಶ್ರೀಯುತರಿಗೆ 2003-04 ಬ್ಲಾಕ್‌ನಲ್ಲಿ 30 ದಿನಗಳು ಗಳಿಕೆ ರಜೆಗೆ ನಗದೀಕರಣ ಮಂಜೂರು ಮಾಡಲು ಇವರ ಖಾತೆಯಲ್ಲಿ ಜಮೆ ಇರುವ ಗಳಿಕೆ ರಜೆ ಮಾಹಿತಿಯನ್ನು ಒದಗಿಸುವಂತೆ ಕೋರಿರುವರು.

ಶ್ರೀ ಎಂ. ಶಿವಕುಮಾರಸ್ವಾಮಿ, ಅಧೀನ ಕಾರ್ಯದರ್ಶಿ ಇವರು ನಿಯೋಜನೆ ಮೇಲೆ ತೆರಳಿದ ಸಂದರ್ಭದಲ್ಲಿ ಇವರ ಸೇವಾ ಪುಸ್ತಕವನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸಲಾಗಿದ್ದ ಕಾರಣ ಇವರ ಗಳಿಕೆ ರಜೆ ಮಾಹಿತಿಯನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾವಿ ಇವರಿಗೆ ಒದಗಿಸಲು ಪತ್ರ ಸಂಖ್ಯೆ: ಸಿಆಸುಇ 273 ಸಅಸೇ 2002, ದಿನಾಂಕ: 26.8.2004 ರಲ್ಲಿ ಮಹಾಲೇಖಪಾಲರಿಗೆ ಸೂಚಿಸಲಾಗಿದೆ. ಈ ಪತ್ರದಲ್ಲಿ ಸೂಚಿಸಿರುವಂತೆ ಮಹಾಲೇಖಪಾಲರ ಕಛೇರಿಯಿಂದ ಶ್ರೀ ಎಂ. ಶಿವಕುಮಾರಸ್ವಾಮಿ ಇವರ ಗಳಿಕೆ ರಜೆ ಮಾಹಿತಿ ಒದಗಿಸದೇ ಇದ್ದ ಕಾರಣ ಶ್ರೀಯುತರಿಗೆ 2003-04 ಬ್ಲಾಕ್ ಅವಧಿಯಲ್ಲಿ ಗಳಿಕೆ ರಜೆಗೆ ನಗದೀಕರಣ ಮಂಜೂರು ಮಾಡಿರುವುದಿಲ್ಲವೆಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಬೆಳಗಾವಿ ಇವರು ಅವರ ಪತ್ರ ಸಂಖ್ಯೆ: ಸಂ.ಜಿಪಂ.ತಾಪಸಿ.ಸಿಬ್ಬಂದಿ.ವಿವ 49.2004-05, ದಿನಾಂಕ: 1.3.2005 ರಲ್ಲಿ ತಿಳಿಸಿ, 2003-04 ಬ್ಲಾಕ್ ಅವಧಿ ಮುಕ್ತಾಯವಾಗಿರುವುದರಿಂದ ಶ್ರೀ ಎಂ. ಶಿವಕುಮಾರಸ್ವಾಮಿ ಇವರಿಗೆ 2003-04 ಬ್ಲಾಕ್ ಅವಧಿಗೆ ನಗದೀಕರಣ ಮಂಜೂರು ಮಾಡುವ ಬಗ್ಗೆ ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 266 ಸಅಸೇ 2005, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2005**

ಶ್ರೀ ಎಂ. ಶಿವಕುಮಾರಸ್ವಾಮಿ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಪ್ರಸ್ತುತ ನಿಯೋಜನೆ ಮೇಲೆ ಕಾರ್ಯನಿರ್ವಾಹಕ ಅಧಿಕಾರಿ, ಬೈಲಹೊಂಗಲ ಇವರು 2003-04 ಬ್ಲಾಕ್ ಅವಧಿಗೆ ಗಳಿಕೆ ರಜೆ ನಗದೀಕರಣಕ್ಕಾಗಿ ರಜೆ ಅರ್ಜಿಯನ್ನು ನಿಗದಿತ ಸಮಯದಲ್ಲಿ ಸಲ್ಲಿಸಲಾಗಿರುವುದರಿಂದ ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾವಿ ಇವರು ಶ್ರೀಯುತರಿಗೆ ಸದರಿ ಬ್ಲಾಕ್ ಅವಧಿಯಲ್ಲಿ ಗಳಿಕೆ ರಜೆಗೆ ನಗದೀಕರಣ ಮಂಜೂರು ಮಾಡಿರುವುದಿಲ್ಲವಾದ ಕಾರಣ ಶ್ರೀಯುತರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 118 (2)ನ್ನು ಸಡಿಲಿಸಿ 2003-04 ಬ್ಲಾಕ್ ಅವಧಿಗೆ ದಿನಾಂಕ: 1.8.2004 ರಂದು 30 ದಿನಗಳು ಗಳಿಕೆ ರಜೆಯನ್ನು ಅಧ್ಯರ್ಪಿಸಿಕೊಂಡು ಗಳಿಕೆ ರಜೆ ನಗದೀಕರಣವನ್ನು ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 1491 ವೆಚ್ಚ-5/2005, ದಿನಾಂಕ: 24.9.2005 ರಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 1490 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಶಿಕ್ಷಣ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಇಡಿ 356 ಡಿಪಿಐ 2005, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2005**

ಪದವಿ ಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉಪನ್ಯಾಸಕರುಗಳಿಗೆ ಪ್ರಾಂಶುಪಾಲರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಸ್ಥಳನಿಯುಕ್ತಿಗೊಳಿಸಲಾದ ದಿನಾಂಕ: 27.9.2005ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 356 ಡಿಪಿಐ 2005ರ ಕ್ರಮ ಸಂಖ್ಯೆ:41 ಮತ್ತು 43 ರ ಮಧ್ಯೆ ಕ್ರಮ ಸಂಖ್ಯೆ:42 ಬಿಟ್ಟುಹೋಗಿದ್ದು, ಸೇರ್ಪಡೆಗೊಳಿಸಲಾಗಿದೆ, ಹೆಸರು ಮತ್ತು ವಿಳಾಸವನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

| | | |
|---|---|---|
| 42. | ವಿಜಯ ರೋಜೇಕರ್, ಆಂಗ್ಲ ಉಪನ್ಯಾಸಕರು, ಸಪಪೂಕಾ, ಹೆಬ್ಬಾಳ, ಚಿತ್ತಾಪುರ ತಾ, ಗುಲ್ಬರ್ಗಾ ಜಿಲ್ಲೆ. | ಪ್ರಾಂಶುಪಾಲರು, ಸಪಪೂಕಾ, ಹೆಬ್ಬಾಳ, ಚಿತ್ತಾಪುರ ತಾ, ಗುಲ್ಬರ್ಗಾ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1495 **ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).